ಶ್ರೀಗುರು ಪ್ರಸಿದ್ಧ.

# ಜಲಸಿದ್ಧಿ ಪೂರ್ಣಶಕುನವು.



ಈ ಪುಸ್ತಕದಲ್ಲಿ ಗೌಳಿನುಡಿದಫಲ, ದಿಶದಫಲ, ವಿದಿಕ್ಕಿ
ನಫಲ, ವಾರಫಲ, ನೈವೇದ್ಯದಫಲ, ಓತಿಯಶಕುನ,
ವಾಯಸಶಕುನ, ಹಡದಶಕುನ, ಕಣ್ಣುಹೊಡೆದರೆ
ಶಿಗುನದೋ ರೆಗದೋ ಅಂಗಫಲ, ಬ್ರಾಹ್ಮಣಫಲ,
ಗುಳಿಫಲ, ಸ್ವಿರಗೌಳಿಫಲ, ವ್ಯಾಧಿಪ್ರಶ್ನೆಫಲ,
ಕೈಣಪ್ರಸಂಗಫಲ, ಅರ್ಗದಪ್ರಸಂಗಫಲ,
ಹಲ್ಲಿಬಿದ್ದಫಲ, ಎರಳಶಕುನ, ಸುಳಿಲಕ್ಷಣ,
ಗ್ರಾಮನಾಮಾವಳಿ, ಜಲಶಿಲ್ಪಿ ಇವೆಲ್ಲವುಗಳನ್ನು,
ಲೋಕಹಿತಾರ್ಥವಾಗಿ
ಬೆಂಗಳೂರು ಬುಕ್‌ಡಿಪ್ಪೋ ಏಜೆಂಟ
ವಾಜಪೇಯಂ, ಕೃಷ್ಣೈಯ್ಯನವರಿಂದ,
ಪ್ರಕಟಿಸಲ್ಪಟ್ಟಿತು.

---

(೪ನೇ ಛಾಪಾ ೧೦೦೦-ಪ್ರತಿ.)

---

ಬೆಂಗಳೂರು,
ವಾಗೀಶ್ವರೀಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು
ಕ್ರಯ ೪ ಆಣೆ.

---



1889.

ಶ್ರೀರುಗುಪ್ರಸೀದ.

## ಗೌಳಿನುಡಿದದ್ದಕ್ಕೆ ಶುಭಾಶುಭ ಫಲವು.

೧॥ಆದಿತ್ಯವಾರದಗೌಳಿ॥ಅದುಸುವರ್ಣಛಾಯವುಳ್ಳದ್ದು. ಮೂಡಲ ಮುಖವಾಗಿಯು, ಬೆಂಕಲು ಊರ್ಧ್ವಮುಖವಾಗಿಹುದು. ಪಡವಲುಸ್ತ್ರೀಠಾಣು ಸಮೀಪವಾಗಿಹುದು, ಅದು ಬ್ರಾಹ್ಮಣಜಾತಿ ಆದಿತ್ಯನಿಹನು,ಅದರ ಮೇಲೆ ಏಳುರೇಖೆಗಳುಂಟು,ಅದರಫಲವು,—ಮೂಡಲುನುಡಿದರೆಚೋರವಾರ್ತೆ,ಅಗ್ನಿಯಲ್ಲಿನುಡಿದರೆ ಸಂತೋಷವಾರ್ತೆ,ಇಲ್ಲವೆಅಸಂತೋಷದವಾರ್ತೆ, ಬೆಂಕಲುನುಡಿದರೆ ಅರ್ಥಲಾಭ,ನೈಋತ್ಯದಲ್ಲಿ ನುಡಿದರೆಕಳವಿನಸುದ್ದಿ,ಕೇಡು ಮರಣ,ಪಡವಲನುಡಿದರೆ ಭಯದಸುದ್ದಿ,ಚೋರವಾರ್ತೆ. ವಾಯುವ್ಯದಲ್ಲಿ ನುಡಿದರೆಶುಭವಾರ್ತೆ ವಸ್ತ್ರಲಾಭ ಕುಬೇರನಲ್ಲಿನುಡಿದರೆಸುಖಸಂಭೋಗವು ಈಶಾನ್ಯನಲ್ಲಿನುಡಿದರೆ ಗ್ರಹಪಕ್ರಸುದ್ದಿ, ಬ್ರಹ್ಮಸ್ಥಾನದಲ್ಲಿಶುಭಂ॥೨॥ಸೋಮವಾರದಗೌಳಿ॥ವರ್ಣಬಿಳೇದುಜಾತಿಕ್ಷತ್ರಿ ಅದರಮೇಲೆಏಳುರೇಖೆ,ಅದು ದಕ್ಷಿಣಮುಖವಾಗಿಹುದು ಅದರಫಲವು,—ಮೂಡಲುನುಡಿದರೆ ರಾಜವಾರ್ತೆ ರಾಜ್ಯದಲೆಕ್ಕ ಅಗ್ನಿಯಲ್ಲುಕೇಡಿನಸುದ್ದಿ ಕಷ್ಟವು ದಕ್ಷಿಣದಿಕ್ಕಿನಲ್ಲಿ ಅರ್ಥನಾಶ,ಕಲಹವು ನೈಋತ್ಯದಲ್ಲಿ ನೆಂಟರಬರವು,ಸ್ತ್ರೀಭೋಗವು,ಪಡವಲು, ಒಳ್ಳೇವಾರ್ತೆ ಕೇಳುವರು. ವಾಯುವ್ಯನಲ್ಲಿ ನುಡಿದರೆ ಅಗ್ನಿಯಭಯವು. ಉತ್ತರದಲ್ಲಿ ಸುಖದಗೋಷ್ಟಿ ಈಶಾನ್ಯದಲ್ಲಿಚೋರವಾರ್ತೆ ಬ್ರಹ್ಮಸ್ಥಾನದಲ್ಲಿಹೀನವು॥೩॥ಮಂಗಳವಾರದಗೌಳಿ॥ಸುವರ್ಣಛಾಯು,ಜಾತಿವೈಶ್ಯನು,ಅದು ದಕ್ಷಿಣಮುಖವಾಗಿಹುದು, ಸ್ತ್ರೀಯರಸಮೀಪದಲ್ಲಿಇರುವದು. ಅದರಫಲವು, ಮೂಡಲುಕಲಹ,ಅಗ್ನಿಯಲ್ಲನೆಂಟರುಬರುವರು. ದಕ್ಷಿಣದಲ್ಲಿ ನೆಂಟರಕ್ಲೇಶ, ದುಃಖದವಾರ್ತೆ ನೈಋತ್ಯದಲ್ಲಿ ಸರ್ಪಕಚ್ಚಿದಸುದ್ದಿ,ತನಗೆನೋವು. ಪಶ್ಚಿಮದಲ್ಲಿಸ್ತ್ರೀಯರ ಭೋಗವು. ವಾಯುವ್ಯನಲ್ಲಿ ಬಹುವಾರ್ತೆ,ಕಾರ್ಯಹಾನಿ. ಕುಬೇರನಲ್ಲಿ ಅರ್ಥಲಾಭ,ಸ್ತ್ರೀಯರಗೋಷ್ಟಿ. ಈಶಾನ್ಯನಲ್ಲಿ ಸ್ತ್ರೀಯರದುಃಖದವಾರ್ತೆ. ಬ್ರಹ್ಮಸ್ಥಾನದಲ್ಲಿನುಡಿದರೆ ಕಲಹವೆಂದು ಹೇಳುವದು॥೪॥ ಬುಧವಾರದಗೌಳಿ ॥ ಮಸುರನಸುಕಪ್ಪು, ಅದರಮೇಲೆ ಒಂಭತ್ತುರೇಖೆ, ಅದುಜಾತಿಶೂದ್ರನು ಉತ್ತರಮುಖವಾಗಿಹುದು,ಅದರಫಲವು,—ಮೂಡಲುನುಡಿದರೆ ಸ್ತ್ರೀಯರಬರವು ಅಗ್ನಿಯಲ್ಲಿಇಷ್ಟವಾರ್ತೆ, ಯಮನಲ್ಲಿಧನಹಾನಿ,ನೈಋತ್ಯದಲ್ಲಿ ಭೋಗಿಸುವಸುದ್ದಿ,ವರುಣನಲ್ಲಿ ಅರ್ಥನಾಶ,ವಾಯುವ್ಯದಲ್ಲಿ ನುಡಿದರೆ ಹುಮ್ಮ,ವೀಳ್ಯದೆ

ಲೆಬರವು,ಉತ್ತರದಲ್ಲಿ ಹಣ್ಣು ಕಾಯಿ ಭೋಗಿಸುವಂಥಾದ್ದು ಈಶಾನ್ಯನಲ್ಲಿ ಭೋಜನವು. ಬ್ರಹ್ಮಸ್ಥಾನದಲ್ಲಿ ಸಂತೋಷವೆಂದ್ಹೇಳುವದು ||೫|| ಗುರುವಾರದಗೌಳಿ||ಇದು ಲಂಬವರ್ಣ, ಬ್ರಾಹ್ಮಣಜಾತಿ, ಉತ್ತರಮುಖವಾಗಿಹುದು. ಅದರಮೇಲೆ ಏಳುರೇಖೆಗಳುಂಟು, ಅದರಫಲವು,-ಮೂಡಲುನುಡಿದರೆ ವಿದ್ಯದಗೋಷ್ಟಿ, ಶುಭವಾರ್ತೆ. ಅಗ್ನಿಯಲ್ಲು ಅರ್ಥನಾಶ ನೋವು, ಕಲಹ. ದಕ್ಷಿಣದಲ್ಲಶುಭವಾರ್ತೆ. ನೈಋತ್ಯದಲ್ಲಿ ಸರ್ಪಕಚ್ಚಿದ ಸುದ್ದಿಬಹದು. ವರುಣನಲ್ಲಿ ನೆಂಟರಜಗಳ. ವಾಯುವ್ಯದಲ್ಲಿ ವಸ್ತ್ರಲಾಭ, ಉತ್ತರದಲ್ಲಿ ತನ್ನವರೊಳಗೆ ವಿರೋಧವು. ಈಶಾನ್ಯದಲ್ಲು ಕಾರ್ಯಸಿದ್ಧಿಕಾಸೆನಸಿದ್ಧಿ ಆಗುವದು ಬ್ರಹ್ಮಸ್ಥಾನದಲ್ಲಿನೆನದಕಾರ್ಯಸಿದ್ಧಿಯಾಹುದು||೬|| ಶುಕ್ರವಾರದಗೌಳಿ || ಶಾಮಳವರ್ಣ, ಹಸರುವರ್ಣ,ವೈಶ್ಯಜಾತಿ,ಅದರಮೇಲೆ ಒಂಭತ್ತುರೇಖೆ ಮೂಡಲು ಮುಖವಾಗಿಹುದು. ಅದರಫಲವು,-ಮೂಡಲು ನೆಂಟರುಬರುವರು ಅಗ್ನಿಯಲ್ಲಿ ಸ್ತ್ರೀಯರ ಸಂಭೋಗವು,ಯಮನಲ್ಲಿಕೆಟ್ಟವಾರ್ತೆ, ನೈಋತ್ಯದಲ್ಲುಭೋಗಿಸುವಂಥಾ ವಸ್ತು ಬರುವವು. ವರುಣನಲ್ಲಿ ರಾಜದಸುದ್ದಿ, ವಾಯುವ್ಯನಲ್ಲಿ ಅಳುವಿನಸುದ್ದಿ ಉತ್ತರದಲ್ಲಿ ಕೆಟ್ಟವಾರ್ತೆ. ಈಶಾನ್ಯನಲ್ಲಿ ಅರ್ಥಲಾಭವು,ಬ್ರಹ್ಮಸ್ಥಾನದಲ್ಲಿ ಶುಭಯೆಂದು ತಿಳಿಯುವದು||೭|| ಶನಿವಾರದಗೌಳಿ || ಕರೇದು ಅದರಮೇಲೆ ಹತ್ತುರೇಖೆ ಅನಾಮಿಕಜಾತಿ ಉತ್ತರಮುಖವಾಗಿಹುದು ಅದರಫಲವು,ಮೂಡಲುನುಡಿಯೆ ರೋಗವಾರ್ತೆ, ಅಗ್ನಿಯಲ್ಲಿ ಬಳಸಿನಸುದ್ದಿಯಮನಲ್ಲಿ ಅರ್ಥಸಿದ್ಧಿಜಯವು, ನೈಋತ್ಯದಲ್ಲಿ ಕೆಟ್ಟವಾರ್ತೆ ವರುಣನಲ್ಲಿ ಸುಖಸಂಭೋಗವು,ವಾಯುವ್ಯನಲ್ಲಿ ಮಾತಿನಸುದ್ದಿ ಉತ್ತರದಲ್ಲು ಸಂತೋಷಸುದ್ದಿ, ಈಶಾನ್ಯದಲ್ಲು ಮರಣದ ಸುದ್ದಿ, ಬ್ರಹ್ಮಸ್ಥಾನದಲ್ಲಿ ರಾಜಮನ್ನಣೆ.

### ವಿದಿಕ್ಕಿನಫಲವು.

ಹಿಂದೆ ಹೇಳಿರುವ ಯೇಳುವಾರಗಳಲ್ಲಿ ಯೆಚ್ಚರ ಗವಳಿಯು
ನುಡಿಯದೆಲೆ ಕದಾಚಿತ್ತವಿದಿಕ್ಕಿನಲ್ಲಿ ನುಡಿದರೆಅದರಫಲವು.

### ವಾರಗಳು—ಫಲಶ್ರುತಿಯು.

೧||ರವಿವಾರ—ಇಂದ್ರನಲ್ಲಿ ಕೇಡಿನವಾರ್ತೆ, ಅಗ್ನಿಯವಿದಿಕ್ಕಿನಲ್ಲಿ ಕಲಹವು, ಯಮನವಿದಿಕ್ಕಿನಲ್ಲಿ ಅಪಜಯವು, ನೈಋತ್ಯದಲ್ಲಿ ಭೋಜನ,ವರುಣವಿದಿಕ್ಕಿನಲ್ಲಿ ಕೇಡಿನ ವಾರ್ತೆ, ವಾಯುವ್ಯವಿದಿಕ್ಕಿನಲ್ಲಿ ಪರಿಮಳದ ಬರವು,ಕುಬೇರನಲ್ಲು ವಿದ್ಯದಗೋಷ್ಟಿ, ಈಶಾನ್ಯನಲ್ಲು, ಪುಷ್ಪಲಾಭ, ಬ್ರಹ್ಮಸ್ಥಾನ

ದ್ದಸೂರ್ಯನಿಹನು ಸರ್ವಕಾರ್ಯವು.

೨॥ಸೋಮವಾರ--ಇಂದ್ರನವಿದಿಕ್ಕಿನಲ್ಲು ನೆಂಟರಬರವು, ಅಗ್ನಿಯವಿದಿಕ್ಕಿನಲ್ಲು ಬಹುವಾರ್ತೆ,ಯಮನವಿದಿಕ್ಕಿನಲ್ಲಿನನದಕಾರ್ಯಲಗುವದು,ನೈಋತ್ಯದಲ್ಲಿ ದುಃಖದವಾರ್ತೆ, ವರುಣನಲ್ಲಿ ನೆಂಟರ ಬರವು, ವಾಯುವ್ಯನಲ್ಲಿ ಶತ್ರುಗಳಭಯವು. ಕುಬೇರನಲ್ಲೂಜಯದವಾರ್ತೆ,ಈಶಾನ್ಯವಿದಿಕ್ಕಿನಲ್ಲಿಶುಬ ಬ್ರಹ್ಮಸ್ಥಾನದಲಿರಾಹು, ಭೂಮಿವಿದಿಕ್ಕಿನಲ್ಲಿಇಂದ್ರನಿಹನುಐಶ್ವರ್ಯನಹನು

೩॥ಮಂಗಳವಾರ-ಇಂದ್ರನವಿದಿಕ್ಕಿನಲ್ಲಿವಸುಗೆಯವಾರ್ತೆ, ಅಗ್ನಿಯವಿದಿಕ್ಕಿನಲ್ಲಿಬಿಳ್ಳೆಮನುಷ್ಯನದರ್ಶನವು, ಯಮನವಿದಿಕ್ಕಿನಲ್ಲಿರೋಗಿ, ನೈಋತ್ಯವಿದಿಕ್ಕಿನಲ್ಲಿ ರಾಜಭಯವು, ವರುಣದಿಕ್ಕಿನಲ್ಲಿ ಅರ್ಥನಾಶ, ವಾಯುವ್ಯವಿದಿಕ್ಕಿನಲ್ಲಿರಾಜತೇಜ,ಕುಬೇರನಲ್ಲುಕಲಹ, ಈಶಾನ್ಯವಿದಿಕ್ಕಿನಲ್ಲುರಾಜಸನ್ಮಾನ,ಬ್ರಹ್ಮಸ್ಥಾನದಲ್ಲುಶನಿಇಹನು, ಭೂಮಿವಿದಿಕ್ಕಿನಲ್ಲುಗುರುನಿಹನುಧನಲಾಭ ೪॥ಬುಧವಾರ--ಇಂದ್ರವಿದಿಕ್ಕಿನಲ್ಲಿ ಸುಗಂಧಬರವು,ಅಗ್ನಿಯಲ್ಲಿ ಸುಗಂಧಬರವು, ಯಮನವಿದಿಕ್ಕಿನಲ್ಲಿ ಸ್ತ್ರೀಯರಕೇದು,ನೈಋತ್ಯನವಿದಿಕ್ಕಿನಲ್ಲಿ ಕೇಡು ಚೋರಭಯವು, ವರುಣವಿದಿಕ್ಕಿನಲ್ಲು ರಾಜವಾರ್ತೆ,ವಾಯುವ್ಯದಿಕ್ಕಿನಲ್ಲಿ ಅಗ್ನಿಭಯವು, ಕುಬೇರವಿದಿಕ್ಕಿನಲ್ಲಿ ಕೆಂಪುವಸ್ತ್ರಬರವು, ಈಶಾನ್ಯನಲ್ಲು ಅವಮನ್ನಣೆ,ಬ್ರಹ್ಮಸ್ಥಾನದಲ್ಲಿ ಶನಿಇಹನು,ಭೂಮಿವಿದಿಕ್ಕಿನಲ್ಲಿ ಬುಧನಿಹನು,ನೆಂಟರು ಮತ್ತು ವಿಶೇಷವಾದವಸ್ತುವಿನಬರವು.

೫॥ಗುರುವಾರ—ಇಂದ್ರವಿದಿಕ್ಕಿನಲ್ಲಿ ರಾಜಭಯವು, ಅಗ್ನಿಯಲ್ಲಿ ಸಂತೋಷವಕ್ಕು, ಯಮನಲ್ಲು ಚೋರತನ,ನೈಋತ್ಯವಿದಿಕ್ಕಿನಲ್ಲು ಬೇಸತನೋಡುವಷ್ಟೈಣಗತಿ,ವರುಣವಿದಿಕ್ಕಿನಲ್ಲಿ ಅಗ್ನಿಭಯ ವಾಯುವ್ಯವದಿಕ್ಕಿನಲ್ಲಿ ಸ್ತ್ರೀಯರಭೋಗ, ಕುಬೇರನಲ್ಲು ಕೇಡಿನವಾರ್ತೆ, ಈಶಾನ್ಯ ವಿದಿಕ್ಕಿನಲ್ಲು ರಾಜಸನ್ಮಾನ,ಬ್ರಹ್ಮಸ್ಥಾನದಲ್ಲಿ ರಾಹುನಿಹನು, ಭೂಮಿವಿದಿಕ್ಕಿನಲ್ಲಿ ಕೇತುಇಹನು ರೋಗವಕ್ಕು ಎಂದು ಹೇಳುವದು.

೬॥ ಶುಕ್ರವಾರ--ಇಂದ್ರವಿದಿಕ್ಕಿನಲ್ಲಿ ಸಂತೋಷ,ಅಗ್ನಿಯವಿದಿಕ್ಕಿನಲ್ಲಿ ಅಗ್ನಿಯಭಯವು,ಯಮನವಿದಿಕ್ಕಿನಲ್ಲಿ ಆಭರಣವಕ್ಕು, ನೈಋತ್ಯವಿದಿಕ್ಕಿನಲ್ಲಿಶತ್ರುನಾಶ,ವರುಣವಿದಿಕ್ಕಿನಲ್ಲು ದೂರದವರಬರವು,ವಾಯುವ್ಯದಿಕ್ಕಿನಲ್ಲಿ ಪೈಣ,ಕುಬೇರನಲ್ಲೂ ಕಾರ್ಯಹಾನಿ, ಈಶಾನ್ಯವಿದಿಕ್ಕಿನಲ್ಲಿಶತ್ರುರಾಜಭಯವು,ಬ್ರಹ್ಮಸ್ಥಾನದಲ್ಲಿ ಶುಕ್ರನಿಹನು, ಭೂಮಿ ವಿದಿಕ್ಕಿನಲ್ಲಿ ಮಂಗಳನಿಹನು ಮರಣದವಾರ್ತೆ ಯೆಂದು ಹೇಳುವದು.

೭॥ ಶನಿವಾರ--ಇಂದ್ರವಿದಿಕ್ಕಿನಲ್ಲು ಅಗ್ನಿಭಯವು, ಅಗ್ನಿಯವಿದಿಕ್ಕಿನಲ್ಲಿ ವಿದ್ಯದಗೋಷ್ಠಿ, ಯಮನವಿದಿಕ್ಕಿನಲ್ಲಿ ಫಲದವಸ್ತು ಬರುವವು, ನೈಋತ್ಯವಿದಿಕ್ಕಿನಲ್ಲಿ ಆಯುಧಬರವು, ವರುಣನದಿಕ್ಕಿನಲ್ಲಿ ದೂರದಲ್ಲಿ ಯವಸುಗೆ ಬಪವು, ಕುಬೇರವಿದಿಕ್ಕಿನಲ್ಲಿ ಋಗಳದಲ್ಲಿ ವೋಡಿಹೋಗುವನು, ಈಶಾನ್ಯವಿದಿಕ್ಕಿನಲ್ಲಿಫಲವಿಲ್ಲ, ಬ್ರಹ್ಮಸ್ಥಾನದಲ್ಲಿ ಸೂರ್ಯನಿಹನು, ಭೂಮಿವಿದಿಕ್ಕಿನಲ್ಲಿಚಂದ್ರನಿಹನು, ಸೌಭಾಗ್ಯವಾಗುವದು, ಮೇಲಾದ ವಸ್ತು ಬರುವದು ಯೆಂದು ಹೇಳುವರು ಚರಗವಳಿಅಂಗರೆ ಒಂದೇರಾವಿನಲ್ಲಿ ಇದೆಚರಿಸಾಡುತ್ತನುಡಿವ

ದಿಕ್ಕಿನಫಲ ಸಮಾಪ್ತ.

ಅನ್ಯ ಸ್ಥಿರಗವಳಿಯು ನುಡಿದ ಫಲವು.

ಸ್ಥಿರಗವಳಿಯಮನೆ ಇಂದ್ರನಲ್ಲಿ ಸೂರ್ಯನು ಅಗ್ನಿಯಲ್ಲಿ ಮಂಗಳನು ಯಮನಲ್ಲಿ ಗುರುವು, ನೈಋತ್ಯನಲ್ಲಿ ಬುಧನು ವರುಣನಲ್ಲಿ ಶುಕ್ರನು, ವಾಯವ್ಯನಲ್ಲಿ ಶನಿಯು, ಕುಬೇರನಲ್ಲಿ ಚಂದ್ರನು ಈಶಾನ್ಯನಲ್ಲಿ ರಾಹು, ಇವು ಯಾವಾಗಲೂ ಸ್ಥಿರವಾಗಿಹ ಮನೆಯಫಲ.

ಆದಿತ್ಯನಮನೆಯಲ್ಲಿ ನುಡಿದರೆ ಗುಲ್ಲಿನಸುದ್ದಿ, ಚಂದ್ರನಮನೆಯಲ್ಲಿನುಡಿದರೆ ಹೆಣ್ಣಿನಋಗಳ, ಎರಡುಮೂರುವ್ಯಾಳೆ ನುಡಿದರೆ ಹೆಣ್ಣಿನಸಾವು, ಮಂಗಳನ ಮನೆಯಲ್ಲಿ ನುಡಿದರೆ ಕೇಪಿನವನು ಕಪ್ಪಿನವನ್ನ ಕೊಂಡಾಡಿ ಒಹುದು, ಬುಧನ ಮನೆಯಲ್ಲಿನುಡಿದರೆ ಹುಲಿಸುದ್ದಿ, ಹಾವಿನಸುದ್ದಿ, ಋಗಳದಸುದ್ದಿ ಯೆಂದೇಳುವದು, ಗುರುವಿನ ಮನೆಯಲ್ಲಿನುಡಿದರೆ ಬ್ರಾಹ್ಮಣರು ಬರುವರೆಂದು ಹೇಳುವದು, ಶುಕ್ರನಮನೆಯಲ್ಲಿ ನುಡಿದರೆ ಕಳವಿನ ಸುದ್ದಿ ಯೆಂದೇಳುವದು, ಶನಿಯ ಮನೆಯಲ್ಲಿ ರಸವಸ್ತು ಧನಧಾನ್ಯಕೊಂಡು ಕಪ್ಪಿನವನು ಬರುವನು, ಅವನ ಯಡಕ್ಕೆ ಮೃತ್ಯುಇರುವದು. ರಾಹುವಿನ ಮನೆಯಲ್ಲಿ ನುಡಿಗರೆ, ಜೀವದನ ಕುರಿಯ ಋಗಳವು.

ಇದು ನಿಜಸ್ಥಾನದ ಗವಳನುಡಿದ ಫಲಸಮಾಪ್ತ.

ಗ್ರಹಗಳು ಪ್ರದಕ್ಷಿಣಕ್ಕೆ ಲ್ಲಿಂದಫಲವು.

ಭೋಜನಕ್ಕೆ ಹೋಗುವವ್ಯಾಳೆಯಲ್ಲಿ ಸೂರ್ಯನಮೇಲೆ ನುಡಿದರೆ ಊಟವನ್ನದು. ಚಂದ್ರನಮೇಲೆನುಡಿದರೆ ಮುಂಡಮೇಲೆ ತಿರಗುವದು. ಮಂಗಳನಮೇಲೆ ನುಡಿದರೆ ಅಮೃತಾನ್ನವು ದೊರಕುವದು. ಬುಧನ ಮೇಲೆ ನುಡಿದರೆ ಯಿಡೆಯಬಿಟ್ಟು ಯೇಳುವದು, ಒಂದುವ್ಯಾಳೆಮೃಟ ಮಾಡಿದರೆವಾಂತಿಯೆಂದೇಳುವದು, ಗುರುವಿನ ಮೇಲೆ ನುಡಿದರೆ ಅಮೃತಾಂನವು ಶಿಕ್ಕು

ವದು, ಶುಕ್ರನಮೇಲೆ ನುಡಿದರೆ, ಅನ್ನ ಸಗರಿಗೆ ಆಗುವದು, ಶನಿಯ
ಮೇಲೆ ನುಡಿದರೆ, ನೂಟನಾದಿ ಸಂತೋಷ ವಾಗಿಹನು, ರಾಹುವಿನಮೇ
ಲೆ ನುಡಿದರೆ ಸೂಪಾನ್ನದ ಊಟವೆಂದು ಹೇಳುವದು.

ಅನ್ನ ಅಡದ ಪ್ರಸಂಗದಲ್ಲಿ ನುಡಿದದ್ದಕ್ಕೆ.

ಸೂರ್ಯನಮೇಲೆನುಡಿದರೆ ತಾಯಿಯಾಗಲಿ, ಅಥವ ಕೂಸಾಗಲಿ ದ
ಣಾಕೊಂಬುವದು, ಚಂದ್ರನಮೇಲೆ ನುಡಿದರೆ ಬಹಳ ಇಟ್ಟಡಿಯಾಗಿ ಹಡೆ
ವಳು ಪರಂತುಹೆಣ್ಣು ಹಡಿವಳೆಂದೇಳುವದು, ಮಂಗಳನಮೇಲೆ ನುಡಿದರೆ
ರೋಗದಲ್ಲಿ ಮಲಗಿಹುದು. ಬುಧನಮೇಲೆ ನುಡಿದರೆ ತಾಯಾಗಲಿ,ಅಥವಾ
ಕೂಸಾಗಲಿ, ದಣಾಕೊಂಬುವದು ಗುರುವಿನಮೇಲೆ ನುಡಿದರೆ ಸುಖದಿಂ
ದ ಗಂಡುಮಗನನ್ನ ಹಡಿಯುವಳು, ಶುಕ್ರನಮೇಲೆನುಡಿದರ ಹೆಣ್ಣುಹಡಿ
ವಳು, ಶನಿಯುಮೇಲೆ ನುಡಿದರೆ ಗಂಡು ಹಡಿವಳು,ಮುಂಡಿಯುಮೇಲೆ ನುಡಿ
ದರೆ ಮತ್ತೆ ಇಹದು, ರಾಹುವಿನಮೇಲೆ ನುಡಿದರೆ ಆಯುಷ್ಯಹೀನನು.

ಕಳವುಹೋದ ಪ್ರಸಂಗದಲ್ಲಿ.

ಸೂರ್ಯನಮೇಲೆ ನುಡಿದರೆ ಹೋದದ್ದುಯೇನುಅಂದರೆ ನಾಲ್ಕು ಕಾ
ಲುಳ್ಳಜೀವವುಳ್ಳಪಶು ಮೂಡ್ಲು ಹೋಯಿತು,ಚಂದ್ರನ ಮೇಲೆ ನುಡಿದರೆ
ಕುಬೇರದಿಕ್ಕಿಗೆ ಯೋಯಿತು ಕಾಣಲರಿಯರು, ಮಂಗಳನಮೇಲೆ ನುಡಿ
ದರೆ ಅಗ್ನಿಯದಿಶದಲ್ಲಿ ವದನಕಾಂಬುವರು, ಬುಧನಮೇಲೆನುಡಿದರೆ ನೈಋ
ತ್ಯ ದಿಕ್ಕಿಗೆಹೋಯಿತು ಕಾಣಲರಿಯರು, ಗುರುವಿನಮೇಲೆ ನುಡಿದರೆ ದ
ಕ್ಷಿಣಕ್ಕೆ ಹೋಯಿತು ಕಾಂಬುವರು, ಶುಕ್ರನಮೇಲೆನುಡಿದರೆ ಪಡುವಣ
ದಿಶಕ್ಕೆ ಹೋಯಿತು, ಅರ್ಥಬರುವದು,ಶನಿಯುಮೇಲೆ ನುಡಿಯಲುವಾಯು
ವ್ಯಕ್ಕೆಹೋಯಿತು ತಾಮಸದಲ್ಲಿ ಕಾಂಬುವರು,ರಾಹುವಿನಮೇಲೆ ನುಡಿದ
ರೆ ಈಶಾನ್ಯಕ್ಕೆ ಹೋಯಿತು ಕೊಂಡುಹೋದವನಿಗೂ ತನಗೂ ಬಳಕ
ಸಿಕ್ಕಬಹುದು.

ಪಾದಗತಿಯಿಂದ ಹುಲಿಯುಬ್ಯಾಟೆ ಪ್ರಸಂಗ.

ಸೂರ್ಯನಮೇಲೆ ನುಡಿದರೆ ಯಜಮಾನನಿಗಾಗಲಿ, ಆತನ ಕುದುರಿಗಾಗ
ಲಿಹೀನವು,ಚಂದ್ರನಮೇಲೆ ನುಡಿದರೆ ಶಾಂತಿ, ಮಂಗಳನಮೇಲೆ ನುಡಿದರೆ
ತಂಮುದು ಗೆಲ್ಲುವದು,ಬುಧನಮೇಲೆನುಡಿದರೆ ತನ್ನ ವೈರಿ ಗೆಲುವನು,ಶುಕ್ರ
ನಮೇಲೆನುಡಿದರೆ ತಮ್ಮ ಹುಲಿಗೆಳಿವದು, ಶನಿಯುಮೇಲೆ ನುಡಿದರೆ ಈ ತನಂ
ನಸ ಹುಲಿಯುಬಿಡುವದು,ರಾಹುವಿನ ಮೇಲೆ ನುಡಿದರೆತಮ್ಮದು ಸೋವು.

ಮಳೆಯ ಪ್ರಸಂಗದಲ್ಲಿ ನುಡಿದಫಲ.

ಸೂರ್ಯನಮೇಲೆನುಡಿದರೆ ಮಳೆಯುಂಟು, ಚಂದ್ರನಮೇಲೆ ನುಡಿದರೆ ಅಲಸ್ಯ,ಮಂಗಳನಮೇಲೆ ನುಡಿದರೆ ಮಳೆಯಿಲ್ಲ,ಬುಧನಮೇಲೆ ನುಡಿದರೆ ಹದ ಮಳೆ, ಗುರುವಿನಮೇಲೆ ನುಡಿದರೆ ಮಳೆ ಅಲ್ಪ ಸ್ವಲ್ಪ, ಶನಿಯ ಮೇಲೆನುಡಿದರೆ ಶುಭ ಮಳೆಯುಂಟು ಮತ್ತು ಶುಕ್ರನಮೇಲೆ ನುಡಿದರೆ ಅಲ್ಪ ಸ್ವಲ್ಪ, ರಾಹುವಿನಮೇಲೆ ನುಡಿದರೆ ಮಳೆಯಿಲ್ಲವೆಂದು ಹೇಳುವದು.

ವ್ಯಾಧಿಯ ಪ್ರಸಂಗದಲ್ಲಿ ನುಡಿದ ಫಲ.

ಸೂರ್ಯನಮೇಲೆ ನುಡಿದರೆ ವ್ಯಾಧಿಯು,ಪರಂತುಮಾಣ್ಗ.ಚಂದ್ರನ ಮೇಲೆ ನುಡಿದರೆ ಆಲಸ್ಯದಿಂದ ಯೇಣ್ಗ, ಮಂಗಳನಮೇಲೆ ನುಡಿದರೆಸಾಯುವನಷ್ಟಂದಾಗಿ ಬದುಕುವದು, ಬುಧನಮೇಲೆ ನುಡಿದರೆ ಕಷ್ಟಪಡುವನು ಗುರುವಿನಮೇಲೆ ನುಡಿದರೆ ಬದುಕುವರು. ಶುಕ್ರನಮೇಲೆ ನುಡಿದರೆ ಅವನೇ ಕಾಯಬೇಕು ಮನುಷ್ಯನ ಯತ್ನವಿಲ್ಲ. ಶನಿಯಮೇಲೆನುಡಿಯೆನೊಂನು ಬದುಕದವರು, ರಾಹುವಿನಮೇಲೆ ನುಡಿದರೆ ನವನವದು ಬದುಕುವರು.

ಪೈಣದ ಪ್ರಸಂಗದಲ್ಲಿ ನುಡಿದರೆ.

ಸೂರ್ಯನಮೇಲೆ ನುಡಿದರೆ ಪೈಣವುಂಟು. ಚಂದ್ರನಮೇಲೆನುಡಿದರೆ ಹಾನಿಯಾಗಿ ತಿರುಗುವನು, ಮಂಗಳನಮೇಲೆನುಡಿದರೆ ಹೋದ ಕಾರ್ಯ ಭದ್ರವಾಗಿ ಬಹದು. ಬುಧನಮೇಲೆನುಡಿದರೆ ಕೇಡಾಗಿಬಹುದು. ಗುರುವಿನಮೇಲೆನುಡಿದರೆ ಛಂದಾಗಿ ಶುಭದಿಂದಬಹುರು ಶುಕ್ರನಮೇಲೆ ನುಡಿದರೆ ಎಡದಹಾದಿಯಲ್ಲಿ ಕಳ್ಳರು ತಗಳುವರು, ಗಮನಬ್ಯಾಡವು, ಶನಿಯಮೇಲೆ ನುಡಿದರೆ ಪೈಣಾತಾಮಸವು, ರಾಹುವಿನಮೇಲೆ ನುಡಿದರೆ ಪೈಣನಾಸ್ತಿ.

ಅರ್ಗದಪ್ರಸಂಗದಲ್ಲಿ ನುಡಿದಫಲ.

ಸೂರ್ಯನಮೇಲೆನುಡಿದರೆ ಅರ್ಗವುಂಟು. ಚಂದ್ರನಮೇಲೆ ನುಡಿದರೆ ಅರ್ಗಯಿಲ್ಲ. ಮಂಗಳನಮೇಲೆನುಡಿದರೆ ಅರ್ಗಕುಂದುವದು. ಬುಧನಮೇಲೆನುಡಿದರೆ ಅರ್ಗವುಂಟು. ಗುರುವಿನಮೇಲೆ ನುಡಿದರೆ ಯೇರುಮಾರು. ಶುಕ್ರನಮೇಲೆನುಡಿದರೆ ಅರ್ಗವಿಲ್ಲ. ಶನಿಯಮೇಲೆ ನುಡಿದರೆ ಅರ್ಗವುಂಟು, ರಾಹುವಿನಮೇಲೆ ನುಡಿದರೆ ಅರ್ಗವಿಲ್ಲ.

ಧಾನ್ಯ ಸಂಗ್ರಹಿಸುವ ವ್ಯಾಳ್ಯದಲ್ಲಿ ನುಡಿದದ್ದಕ್ಕೆಫಲ.

ಸೂರ್ಯನಮೇಲೆ ನುಡಿದರೆ ಧಾನ್ಯ ಇಡಲಾಗದು, ಚಂದ್ರನಮೇಲೆ ನುಡಿದರೆ ಇಡುವದು. ಬುಧನಮೇಲೆ ನುಡಿದರೆ ಪರರಿಗಾಗುವದು.

ಗುರುವಿನಮೇಲೆನುಡಿದರೆ ಮಹಾಲೇಸುಧಾನ್ಯ ಯಿಗುವದು ಶುಕ್ರನಮೇಲೆನುಡಿದರೆ ಬಿಡಲಾಗದು ಶನಿಯುಮೇಲೆನುಡಿಯೆ ದಾನ್ಯಅಟ್ಟಲ್ಲ ಕೆಟ್ಟೀ ತುಯೆಂದು ಹೇಳುವದು.

ಹಲ್ಲಿಯುಶಕುನವು.

ಪರಶುವೊದಲಾದವುಗಳನ್ನು ಮಾರಲಿಕ್ಕೆ ಕೊಂಬೋವಿಷಯುದಲ್ಲಿ.

ಸೂರ್ಯನಮೇಲೆ ನುಡಿದರೆ ಕೊಳ್ಳಲಾಗದು. ಚಂದ್ರನಮೇಲೆ ನುಡಿದರೆಕೊಂಬುವದು ಮಂಗಳನಮೇಲ ನುಡಿದರೆ ಕೊಳ್ಳಲಾಗದು.

ಬುಧನಮೇಲೆನುಡಿದರೆ ಕೊಳ್ಳಲಾಗದು. ಗುರುವಿನಮೇಲೆ ನುಡಿದರೆ ಕೊಂಬುವದು ಶುಕ್ರನಮೇಲೆನುಡಿದರೆ ಕೊಳ್ಳಲಾಗದು,ಶನಿಯುಮೇಲೆನುಡಿದರೆ ಕೊಳ್ಳಲಾಗದು, ರಾಹುನಮೇಲೆನುಡಿದರೆ ಕೊಳ್ಳಲಾಗದು.

ಇನ್ನು ಹಲ್ಲಿಯುಬಿದ್ದಫಲವು.

ತಲೆಯುಮೇಲೆಬೀಳೆ ಕಲಹ ನಡುನತ್ತಿಯುಮೇಲೆ ಬೀಳೆ ತಂದೆ, ತಾಯಿ, ಗುರು,ಹಿರಿಯುರಿಗೆ ಹೀನವು. ಶಿರದ ಬಲಭಾಗದಲ್ಲಿ ಬೀಳೆ ತಂಞಂದರಿಗೆಹೀನ,ಹೆಂಣಿಗೆ ಪಡಹುಟ್ಟಿದವರಿಗೆ ಹೀನ, ಹಿಂಭಾಗದಲ್ಲಿ ಬೀಳೆ ಅಪರಾಧ ಕಲಹ, ಸೋದರ ಮಾವನಿಗೆ ಹೀನವು. ತುರುಬಿನಮೇಲೆ ಬೀಳೆ ವ್ಯಾಧಿ ಪೀಡಾಕಾರವು ಬಲದ ಕೆನ್ನೆಯುಮೇಲೆ ಬೀಳೆ ಮರಣ, ಯುಡದ ಕೆನ್ನೆಯುಮೇಲೆ ಬೀಳೆ ಹಾನಿ ಹೆಡಕಿನಮೇಲೆ ಬೀಳೆ ದಾರಿದ್ರ್ಯ ಹಣೆಯುಮೇಲೆ ಬೀಳೆ ಮದುವೆ ಅಲ್ಲದವನಿಗೆ ಮದುವೆಯಾಗುವದು,ಮದುವೆಯಾದವನಿಗೆ ಮಾತ್ರಹಾನಿ ತೋರುವದು, ಮುಂದಲೆಯುಮೇಲೆ ಬೀಳೆ ಸೋದರಬಾಂಧವರಿಗೆ ಹೀನವು,ಎಡಕಿವಿಯುಮೇಲೆ ಬೀಳೆ ಅಲಂಕಾರ ಲಾಭವು, ಬಲದಕಿವಿಯುಮೇಲೆಬೀಳೆ ಕನಿಷ್ಟವು,ಎಡದಹುಬ್ಬಿನಮೇಲೆಬೀಳೆ ವ್ಯಾಧಿ, ಬಲದಹುಬ್ಬಿನ ಮೇಲೆಬೀಳೆ ಧನಲಾಭ, ಎರಡು ಹುಬ್ಬಿನಮಧ್ಯದಲ್ಲಿ ಬೀಳೆ ಅಪೂರ್ವದರ್ಶನವು,ಬಲದಕಣ್ಣಿನಮೇಲೆಬೀಳೆ ಲಾಭ ಎಡದಕಣ್ಣಿನಮೇಲೆ ಬೀಳೆ ಹಾನಿತೋರುವದು, ಬಲದ ಗಲ್ಲದಮೇಲೆಬೀಳೆಧನಹಾನಿ, ನಡುಮೂಗಿನಮೇಲೆಬೀಳೆ ಧನಹಾನಿ,ನಡುಮೂಗಿನ ಮೇಲೆಬೀಳೆ ದಾರಿದ್ರ್ಯ, ತುದಿಮೂಗಿನಮೇಲೆ ಬೀಳೆಮರಣ,ಮೇಲ್ತುಟಿಯ ಮೇಲೆಬೀಳೆ ಸುಭೋಜನವು, ಕೆಳದುಟಿಯುಮೇಲೆಬೀಳೆಕಲಹವು, ಮುಚ್ಚಿದಬಾಯಿಮೇಲೆಬೀಳೆ ದರಿದ್ರನಹನು, ಸಂಪನ್ನನಹನು, ಗಡ್ಡದ ಮೇಲೆ ಬೀಳೆ ಮರಣ, ಹಲ್ಲುಗಳಮೇಲೆ ಬೀಳೆ ಹಾನಿ, ಎರಡ ಮೀಸದ ಮೇಲೆಬೀಳೆ ಲೇಸು, ಬಲದ

ಮಿಾಸೆಯುಮೇಲೆ ಬೀಳೆ ನಾಶವುಂಟು, ಎಡದ ಕಪಾಳದ ಮೇಲೆಬೀಳೆ ಲೇ
ಸುಂಟು, ವಸ್ತ್ರಲಾಭ, ಎಡದ ಭುಜದಮೇಲೆ ಬೀಳೆ ಬಾಂಧವರಿಗೆ ಹೀನ
ವು, ಬಲದ ಹೆಗಲುಮೇಲೆ ಬೀಳೆ ದಂಡಿಗೆಯು ಸಂಪತ್ತು, ಎಡದ ಹೆಗಲ
ಮೇಲೆ ಬೀಳೆ ಶತ್ರುಕ್ಷಯು, ಕೊರಳಮೇಲೆ ಬೀಳೆ ಅಲಂಕಾರಲಾಭ,ಎಡ
ದ ಕೊರಳಮೇಳೆ ಬೀಳೆ ಚಿಂತಾ ಪರಿಹಾರವು, ಬಲದ ತೋಳಮೇಲೆಬೀ
ಳೆ ಮದುವೆಯಿಲ್ಲದವರಿಗೆ ಮದುವೆಯಾಗುವದು,ಮದುವೆ ಯಾಗಿದ್ದರೆ ಮಾ
ತ್ರ ಯಿಬ್ಬರೊಳ ಗೊಬ್ಬರಿಗೆ ಬೇನೆ, ಎಡದ ಕೊರಳ ಮೇಲೆ ಬೀಳೆ ಪೀ
ಡಾಕರವು, ಬಲದ ತೋಳುಮೇಲೆ ಬೀಳೆ ವಳ್ಳೇದು, ಬಲದ ಮೊಳಕೈ
ಮೇಲೆ ಬೀಳೆ ಹೀನ, ಎಡದ ಮೊಳಕೈಮೇಲೆ ಬೀಳೆ ಸುಭೋಜನ, ಬಲದ
ಮುಂಗೈ ಮೇಲೆಬೀಳೆ ಬಲವಂತ ಸಾಹಸು,ಎಡಧ ಮುಂಗೈ ಮೇಲೆಬೀಳೆ
ವೈರಿಗಳು ಸಾಯುವರು,ಬಲದ ಮುಂಗೈಮೇಲೆ ಬೀಳೆ ಸುಭೋಜನವು,
ಬಲದಮುಂಗೈ ಮೊಳಕೈ ನಡುವೆ ಬೀಳಲು ಸುಭೋಜನವು, ಒಳಭಾಗ
ದೊಳಗೆ ಬೀಳಲು ಲೇಸು, ಎಡದ ಮುಂಗೈ ಮೊಳಕೈ ನಡುವೆಬೀಳೆರೋ
ಗ,ಬಲಭಾಗದಲ್ಲಿ ಬೀಳೆ ಲೇಸು, ಬಲದ ಅಂಗೈಮೇಲೆ ಬೀಳೆ ಧನ ಹಾನಿ-
ಎಡದ ಅಂಗೈ ಮೇಲೆ ಬೀಳೆ ಧನಲಾಭ, ಬಲದ ಹೆಬ್ಬೆರಳಿನಮೇಲೆ ಬೀಳೆ
ಸೈನ್ಯಹೆಚ್ಚುವತು, ಸೈನಯಿದ್ದವರಿಗೆ ಮಧ್ಯಸ್ತ್ರ,ಎಡದ ಹೆಬ್ಬೆರಳಿನಮೇ
ಲೆ ಬೀಳೆ ಸೈನಮುಂದವು, ಬಲಗೈಬೆರಳುಗಳ ಒಳಭಾಗದಬ ಬೀಳಲುಕ್ಲೇ
ಶಾ, ಹೊರಭಾಗದಲ್ಲಿಬೀಳೆ ಉಚ್ಚಾಟಣವು, ಎಡಗೈ ಬೆರಳುಗಳ ಒಳಭಾ
ಗದಲ್ಲಿ ಬೀಳೆ ಭಯವು, ಹೊರಭಾಗದಲ್ಲಿಬೀಳೆ ವ್ಯಾಧಿ - ಎರಡು ಹದಡಿನ
ಮೇಲೆಬೀಳೆ ಕಲಹ ದಾರಿದ್ರ, ಹಲದಬೆರಳುಗಳ ಖಂಡಿಕೆಯು ಮೇಲೆ ಬೀಳೆ
ಚಿಂತೆ ತೋರುವದು- ಉಗುರುಗಳ ಮೇಲೆ ಬೀಳೆ ದಾರಿದ್ರ್ಯವು - ಬಲದ
ಉಗುರುಗಳಮೇಲೆ ಬೀಳೆ ಧನಲಾಭ - ಎದೆಯು ಮೇಲೆ ಬೀಳೆ ಲೇಸು-ಬ
ಲದ ಮೊಲೆಯುಮೇಲೆ ಬೀಳೆ ಗಂಡಸಿಗೆ ಲೇಸು, ಹೆಂಗಸಿಗೆ ಬೀಳಲು ಗಂ
ಡುಸಂತಾನ- ಎಡದ ಮೊಲೆಯುಮೇಲೆ ಬೀಳೆ ಹೆಣ್ಣು ಸಂತಾನ - ಮಕ್ಕ
ಳಿದ್ದವರಿಗೆ ಸುಖಯಿಲ್ಲ, ಹೊಟ್ಟೆಯುಮೇಲೆಬೀಳೆ ಮಕ್ಕಳಾಗುವವು- ಮ
ಕ್ಕಳಿದ್ದವರಿಗೆ ಚಿಂತೆ ಯೆಂದು ಹೇಳುವದು. ಹೊಕ್ಕಳದಮೇಲೆ ಬೀಳೆ
ಸಂತೋಷವು, ಬಲದ ಬೊದ್ಧಿಯುಮೇಲೆ ಬೀಳೆ ವ್ಯಾಧಿ ಎಡದ ಬೊದ್ದಿ
ಯುಮೇಲೆ ಬೀಳೆ ದಶತ್ಯಾಗವು- ಬಲದ ಅಳ್ಳೆಯುಮೇಲೆ ಬೀಳೆ ದಾರಿದ್ರ್ಯ
ವು-ಎಡದ ಅಳ್ಳೆಯು ಮೇಲೆ ಬೀಳೆ ಹೀನವು- ಬಲದ ಕೊಂಕಳೊಳು ಬೀ

ಳಲು ಪೀಡಾಕರವು, ಎಡದ ಕಂಕಳೊಳು ಬೀಳೆ ಸ್ತ್ರೀಸಂಭೋಗ, ನೆ ರ್ಗೆಯಮೇಲೆಬೀಳಲುಗರ್ಭಿಣಿಯುಕ್ಕ್ಕ,ಕೀನ್ನೊಟ್ಟಿಯಮೇಲೆ ಬೀಳಲು ಮ ಕ್ಕಳಿಕ್ಕ, ಇದ್ದವರಿಗೆ ಹೀನವು, ಟೊಂಕದಮೇಲೆ ಬೀಳಲು ವಸ್ತ್ರಲಾಭ ವು, ಬಲದ ಕಟಿಯಮೇಲೆ ಬೀಳಲು ವೈರಿಗಳಿಗೆ ಹೀನ, ಎಡದ ಕಟಿಯ ಮೇಲೆ ಬೀಳಲು ಚೋರಭಯ, ಬಲದ ಪಚ್ಚಾಳದಮೇಲೆ ಬೀಳಲು ಕಲ ಹಾ, ಎಡದ ಪಚ್ಚಾಳದ ಮೇಲೆ ಬೀಳಲು ಸ್ತ್ರೀಲಾಭ, ಬ್ರಹ್ಮನ ತಲೆಯ ಮೇಲೆ ಬೀಳಲು ಮರಣ, ಕಾಲಿನಮೇಲೆ ಬೀಳಲು ಹೀನಾ, ಬೀಜದಮೇ ಲೆ ಬೀಳಲು ದಾರಿದ್ರ್ಯ, ಉಪಸ್ಥೆಯಮೇಲೆ ಬೀಳಲು ರಂಡೆಯಾಗುವಳು. ತಿಗದ ಮೇಲೆ ಬೀಳಲು ಶಿರಿ, ಎಡದ ತಿಗದಮೇಲೆ ಬೀಳಲು ಸಾವು, ಬಲ ದ ತಿಗದಮೇಲೆ ಬೀಳಲು ವಾಹನಲಾಭ,ಬೆನ್ನಿನಮೇಲೆಬೀಳಲುದಾರಿದ್ರ್ಯ, ಬಲದಭಾಗಕ್ಕೆ ಬೆನ್ನಿನಮೇಲೆ ಬೀಳಲು ಅಣ್ಣಂದರಿಗೆ ಹೀನ, ಎಡದಬೆನ್ನಿ ನಮೇಲೆ ಬೀಳಲು ತಮ್ಮಂದರಿಗೆ ಹೀನ ಬಲದ ತೊಡೆಯ ಮೇಲೆಬೀಳಲು ಗಂಡು ಸಂತಾನ, ಎಡದತೊಡೆಯಮೇಲೆ ಬೀಳಲು ಹೆಣ್ಣುಸಂತಾನ,ಹು ಡುಗರಿಗೆ ಬಲದ ಮೊಣಕಾಲಮೇಲೆ ಬೀಳೆ ದೂರಪ್ರೈಣ, ಎಡದ ಮೊಣ ಕಾಲಮೇಲೆ ಬೀಳೆ ಸ್ತ್ರೀಯರಿಗೆ ನೋವು, ಬಲದ ಮೊಣಕಾಲ ಸಂದಿ ಯೊಳು ಬೀಳಲು ಲಾಭವು, ಎಡದ ಮೊಣಕಾಲ ಸಂದಿಯೊಳು ಬೀಳೆ ಲೇಸು, ಬಲದ ಮೀನಗಂಡದ ಮೇಲೆ ಬೀಳೆ ಲೇಸು, ಎಡದ ಮೊಣಕಾಲ ಸಂದಿಯೊಳು ಬೀಳೆ ಲೇಸು ವಾಹನಲಾಭ,ಎಡದ ಮೀನಗಂಡದಮೇಲೆಬೀ ಳೆ ದಾರಿದ್ರ್ಯ, ಮೊಣಕಾಲ ಪಂಟಿಯಮೇಲೆ ಬೀಳೆ ಸ್ತ್ರೀಲಾಭವು ಮೊ ಣಕಾಲ ಯಡಪರಟಿಯಮೇಲೆ ಬೀಳೆ ಕಷ್ಟವು. ಬಲದಕಣಕಾಲಮೇಲೆ ಬೀಳೆ ಪ್ರೈಣವು,ಎಡದ ಕಣಕಾಲಮೇಲೆ ಬೀಳೆ ಮದುವೆ ಯಿಲ್ಲದವರಿಗೆ ಮ ದುವೆಯಾಗುವದು, ಮದುವೆಯಾದವರಿಗೆ ಹೀನವು. ಆದಿತ್ಯವಾರ ಬಿದ್ದರೆ ಕೇಳು ಯಿಲ್ಲದೆ ಯಾವದೊಂದು ಕಾರಣದಿಂದ ಸಂಕೋಚಿತಪ್ಪದು.

ಬಲಗಾಲ ಹರಡಿನ ಮೇಲೆ ಬೀಳೆ ಲೇಸು, ಎಡಗಾಲ ಹರಡಿನಮೇಲೆ ಬೀಳೆ ಹೀನಾ, ಎರಡು ಪಾದದ ಹರಡಿನಮೇಲೆ ಬೀಳೆ ಶುಭವು, ಬಲಗಾಲ ವಳ ಹರಡಿನಮೇಲೆ ಬೀಳೆ ಶುಭವು, ಬಲದ ಹಿಂಮಡದಮೇಲೆ ಬೀಳಲು, ಸ್ನೇ ಹಿತರುಬರುವರು. ಎಡದ ಹಿಂಮಡದಮೇಲೆ ಬೀಳಲು ಹೀನ,ಬಲದಪಾದ ದಮೇಲೆ ಬೀಳಲು ದಾರಿದ್ರ್ಯ, ಎಡದಪಾದದಮೇಲೆ ಬೀಳಲುಲೇಸು, ಬ ಲದ ಅಂಗಾಲಮೇಲೆ ಬೀಳೆ ಬಡವರಿಗೆಲೇಸು, ಧನವಂತರಿಗೆ ಹೀನ, ಎಡ ದ ಅಂಗಾಲಮೇಲೆ ಬೀಳೆ ನೀರಿನಕಂಟಕ, ಬಲಗಾಲಬೆರಳುಗಳಮೇಲೆಬೀ

ಳಲು ಹಾನಿ, ಎಡಗಾಲ ಬೆರಳುಗಳಮೇಲೆ ಬೀಳಲು ರಾಜಭಯವು, ಬಲಗಾಲ ಬೆರಳುಗಳ ಮೇಲೆ ಬೀಳಲು ರಾಜಸನ್ಮಾನ, ಹೊದಿಕೆಯ ಮೇಲೆ ಬೀಳಲು ದಾರಿದ್ರ್ಯ, ಏಳುವಾಗ ಬೀಳಲು ಲಾಭ, ಮುಂದೆಬೀಳಲು ಲೇಸು, ಹಿಂದೆಬೀಳಲು ಪ್ರೈಣ, ಬಲಗಲ್ಲಿ ಬೀಳಲು ಪರಿಮಳಪುಷ್ಪದಫಲ, ಎಡದಲ್ಲಿಬೀಳಲು ಕೇಡಿನ ಶುದ್ಧಿ, ಬಿದ್ದು ಸತ್ತರೆ ಫಲಗಳ ಕೆಡಿಸುವದು. ಪಾದದಿಂದ ಮೇಲಕ್ಕೆ ಯೇರಿದರೆ ಲೇಸು. ಇಳಿದರೆ ಕಷ್ಟ. ತುಡಿಯಲ್ಲಿ ಲಾಭ, ಗಂಡಸಿನ ಮುಡಿಗೆತೊಡಿಗೆಯ ಮೇಲೆಯೇರಿಬೀಳಲು ಐಶ್ವರ್ಯಹಾನಿ, ಹೆಂಗಸಿನಮುಡಿಗೆ ತೊಡಿಗೆಯ ಮೇಲೆ ಬೀಳಲು ಆಭರಣಹಾನಿ, ಎಡದಲ್ಲಿ ಬಿದ್ದು ಎಡಕ್ಕೆ ಏರಿದರೇ ಶುಭಾ ಎಡಕ್ಕೆ ಬಿದ್ದು ಅಲ್ಲಿಂದ ಕೆಳಕ್ಕೆ ಬಿದ್ದರೆ ರೋಗ. ಬಲದಲ್ಲಿ ಬಿದ್ದು ಬಲಕ್ಕೆ ಏರಿದರೆ ಉಡುಗರೆಉತ್ಸಾಹವು. ಬಲದಲ್ಲಿಬಿದ್ದು ಬಲಕ್ಕೆ ಇಳಿದರೆ ಕಷ್ಟಮುಕ್ತಿ. ಬಲದಲ್ಲಬಿದ್ದು ಎಡಕ್ಕೆ ಇಳಿದರೆ ಕಷ್ಟ. ರೋಗ, ಎಡದಲ್ಲಿ ಬಿದ್ದು ಬಲಕ್ಕೆ ಏರಿದರೆ ಮರಣ ವಾರ್ತೆ. ಎಡದಿಂದ ಬಲಕ್ಕೆ ಇಳಿದರೆ ಕಲಹ ಉಂಟು, ಹಿಂಭಾಗದಲ್ಲಿ ಬಿದ್ದು ಮುಂಭಾಗದಲ್ಲಿ ಏರಿದರೆ ಅರ್ಥಲಾಭವು. ಮುಂದುಗಡೆ ಬಿದ್ದು ಹಿಂದಕ್ಕೆ ಏರಿ ಇಳಿದರೆ ಬಡತನ ಪ್ರಾಪ್ತಿಸುವದು, ಬೆನ್ನುಮೇಲೆ ಬಿದ್ದು ಮಂಡಿಯಮೇಲೆ ಏರಿಯಿಳಿದರೆ ಕಲಹ, ಸತ್ತಗವಳಿಯು ಮೇಲೆ ಬೀಳಲು ಪರರ ಸಾವು ಕಾಂಬುವನು, ಇಲ್ಲವೆ ಹಣವ ಹೂರುವನು. ಗವಳಿಯು ಮೈಮೇಲೆ ಮೂತ್ರ ಗೈದದ್ದುಂಟಾದರೆ, ಚಿಂತೆ ದುಃಖ, ಗವಳಿಯು ಹೊಟ್ಟೆಯ ಮೇಲಾಗಿ ಬೀಳಲು ವ್ಯಾಧಿತೋರ್ಗಃ, ನಡೆಯುವಾಗ ಬೀಳೆ ಆಲಸ್ಯದಿಂದ ಫಲಮುಕ್ತ. ನಿಂತಿದ್ದಾಗ್ಯೆ ಬೀಳಲು ಫಲಬೇಗಮುಕ್ತ, ಕೂತಿದ್ದಾಗ ಬೀಳೆ ಎಂಟುದಿವಸಕ್ಕೆ ಫಲಮುಕ್ತ, ಮಲಗಿದ್ದಾಗ ಬೀಲಳು ನಾಲ್ಕುದಿವಸಕ್ಕೆಫಲಮುಕ್ತ ಆದಿತ್ಯವಾರ, ಮಂಗಳವಾರ, ಶನಿವಾರಬೀಳಲು ಹೀನತಪ್ಪದು. ಸೋಮವಾರ, ಗುರುವಾರ, ಶುಕ್ರವಾರ, ಬುಧವಾರ, ಬೀಳಲು ಲೇಸು ತೋರುವದು. ಬಹಳ ಮಾಡಿ ಗಂಡಸಿಗೆ ಬಲಕ್ಕೆ ಹೆಂಗಸಿಗೆ ಎಡಕ್ಕೆಬೀಳಲುಲೇಸು. ಸುಮಾರು ಆದರೆ ಇದಕ್ಕೆ ಪರಿಹರವಂ ಪೇಳ್ವೆ.

ತಣ್ಣೀರಿನಲ್ಲಿ ಸ್ನಾನವಮಾಡಿ ಬಿಳೀಬಟ್ಟೆಯನ್ನುಟ್ಟು ಕರಿಯ ಹತ್ತಿಯುವಳಗೆ ಲೇಪಿಮ ಕೂಡಿಸಿ ಐದು ಬತ್ತಿಯನ್ನು ಮಾಡಿ, ತುಪ್ಪ, ಎಣ್ಣೆ, ಎರಡನ್ನು ಕೂಡಿಸಿ, ಹೊಸ ಪ್ರಣತಿಯಲ್ಲಿ ತಮ್ಮ ತಮ್ಮ ಕುಲ ದೇವರಿಗೆ ದೀವಿಗೆಯಂನು ಹಚ್ಚಬೇಕು. ಅಂದರೆ ಮೇಲೆ ಹೇಳಿದ ಹೀನ ಸ್ಥಾನದ ಗವಳಿಯ ಫಲ ನಿಷ್ಫಲವಾಗ್ಲೀತು.

ವಾರದೋಷಕ್ಕೆ ಊಟದ ವಿಷಯವು.

ಆದಿತ್ಯವಾರ ಬಿದ್ದರೆ ಮೊಸರುಅನ್ನವು, ಸೋಮವಾರ ಬಿದ್ದರೆ ಮಂಡಿಗೆ, ಮಂಗಳವಾರ ಬಿದ್ದರೆ ಹಾಲು ಅನ್ನವು. ಬುಧವಾರ ಬಿದ್ದರೆ ದೋಶೆ, ಗುರುವಾರ ಬಿದ್ದರೆ ಪಾಯಸ, ಶುಕ್ರವಾರ ಬಿದ್ದರೆ ಗಾರಿಗೆ, ಶನಿವಾರ ಬಿದ್ದರೆ ಎಣ್ಣೆ ಅನ್ನವು, ಈ ಪ್ರಕಾರ ಊಟ ಮಾಡಿದರೆ ಗವಳಿ ಬಿದ್ದ ದೋಷವು ಪರಿಹಾರವಾಗುತ್ತದೆ.

ಗವಳಿಯು ನೆಲದಮೇಲೆಬಿದ್ದ ಪಾದಕತೀಫಲವೆಂಪೇಳ್ವೆ, ತಾನುಕೂತ ರಾವಿನಿಂದ ಆಸನಕ್ಕೆಹಿಂಮಡ ಹಚ್ಚಿ ಅಳಿಯೋಣದರಲ್ಲಿ ಬಿದ್ದರಾವಿಗೆ ಯೆಷ್ಟು ಪಾದವಾಗುತ್ತದೆಯೋ ಅವುಗಳಸಂಖ್ಯೆಮತ್ತು ಫಲಶ್ರುತಿಯು.

| | |
|---|---|
| ೧ ಪಾದಯಿದ್ದರೆವಾರ್ತೆ | ೨ ಪಾದಯಿದ್ದರೆ ಹಾನಿ |
| ೩ ಪಾದಯಿದ್ದರೆ ಕಲಹ | ೪ ಪಾದಯಿದ್ದರೆ ಮನಸ್ಸಿಗೆಚಿಂತೆ |
| ೫ ಪಾದ ಯಿದ್ದರೆ ಅರ್ಥಲಾಭ | ೬ ಪಾದಯಿದ್ದರೆ ಬಂಧನ |
| ೭ ಪಾದ ಯಿದ್ದರೆ ಲಾಭ | ೮ ಪಾದಯಿದ್ದರೆ ಕಲಹ |
| ೯ ಪಾದ ಯಿದ್ದರೆ ಮೃತ್ಯು | ೧೦ ಪಾದಯಿದ್ದರೆ ಅಪಮೃತ್ಯು |
| ೧೧ ಪಾದ ಯಿದ್ದರೆ ಸ್ತ್ರೀಲಾಭ | ೧೨ ಪಾದಯಿದ್ದರೆ ಕಲಹ |
| ೧೩ ಪಾದಿದ್ದರೆಸ್ತ್ರೀಸಂಭೋಗ | ೧೪ ಪಾದಯಿದ್ದರೆಮಹಾಚಿಂತೆ |
| ೧೫ ಪಾದಯಿದ್ದರೆವಸ್ತ್ರಲಾಭ | ೧೬ ಪಾದಯಿದ್ದರೆಚೋರವಾರ್ತೆ |
| ೧೭ ಪಾದಯಿದ್ದರೆಸರ್ವಕಾರ್ಯಸಿದ್ಧಿ | ೧೮ ಪಾದಯಿದ್ದರೆಚೋರವಾರ್ತೆ ಬಂಧುವಿರೋಧ. |
| ೧೯ ಪಾದಯಿದ್ದರೆಧನಲಾಭ | ೨೦ ಪಾದಯಿದ್ದರೆ ಮಹಾಭಯ |

೨೧ ಪಾದಯಿದ್ದರೆಸರ್ವಸಿದ್ಧಿ ಇದಕ್ಕೆಹೆಚ್ಚಿಗೆಯಿದ್ದರೆ ನೋಡಬಾರದು.

ಓತೀ ಕಾಟದ ಶಕುನ ಫಲವು.

ಧನವುಳ್ಳವನಿಗೆ ಮೈಮೇಲೆಬಿದ್ದರೆ ಧನಹಾನಿ,ಬಡವನಿಗೆ ಲೇಸು. ಎಡಗಡೆಗೆ ಬೀಳಲು ಧನವಂತನಾಗುವನು,ಧೊರಗಳಿಗೆಮಾತ್ರ ವಳ್ಳಿತಲ್ಲ. ಬಡವನಿಗೆ ವಳ್ಳಿತು, ಮುಖದಮೇಲೆ ಕಿವಿಯಮೇಲೆ ತಲೆಯಮೇಲೆ ಬೆನ್ನಮೇಲೆ ಬೀಳಲು ಇಷ್ಟುಸ್ಥಳಗಳು ವಳ್ಳಿತಲ್ಲ. ಎರಡು ಪಾದದಮೇಲೆಬೀಳಲು ಅರ್ಥಸಿದ್ಧಿಯಾಗುವದು.

ಯರಳಿಯ ಶಕುನ ಫಲವು

೫—೧ ಕಂಡರೆ ಮಹಾಲಾಭವು,೬—೪ ಕಂಡರೆ ಸುಭೋಜನ,೩—೭ ಕಂಡರೆವಾರ್ತೆ, ೮—೨ ಕಂಡರೆ ಹಾನಿ, ಮರ್ಗಣ್ಣು, ಹೆಣ್ಣು ಗಂಡು ಕೂಡಿ

ಹಿಂದಾಗಿ ಹೋದರೆ ಸುಖವು,ಗಂಡು ಬಲಕ್ಕೆ ಹೋದರೆ ಶುಭವು,ಹೆಣ್ಣು ಎಡಕ್ಕೆ ಹೋದರೆ ಶುಭಾ.

ಓತಿಯು ಮೈಮೇಲೆ ಯೇರಿದಫಲ.

ಬಲದ ಮೊಣ ಕಾಲಿಗೆ ಬಂದರೆ ಪ್ರೈಣವು, ಪಾದದಮೇಲೆ ಏರಿದರೆ ಶುಭಸಿದ್ಧಿ, ಯದೆಯ ಮೇಲೇರಿದರೆ ಸ್ತ್ರೀ ಸಂಭೋಗವು, ಭುಜಕ್ಕೆ ಬಂದರೆ ರಾಜ ಮನ್ನಣೆ, ಶಿರಕ್ಕೆ ಬಂದರೆ ಪಟ್ಟದಫಲ, ಎರಡು ಪಾದವ ನ್ನೇರಿದರೆ ಬಂಧನವುಕ್ಕು, ಮೊಳ ನನ್ನೇರಿದಲ ಕಳ್ಳತನವುಕ್ಕು, ತೊಡಿಗೆ ಬಂದರೆ ಮಕ್ಕಳ ಫಲವುಕ್ಕು, ನಡುವಿಗೆ ಬಂದರೆ ವ್ಯಾಧಿ ಯದೆಗೆ ಬಂದರೆ ಸ್ತ್ರೀಯರಿಗೆ ಹಾನಿ, ಭುಜಕ್ಕೆ ಏರಿದರೆ ಹಾನಿ, ಶಿರಕ್ಕೆ ಯೇರಿದರೆ ಮರಣಾ ಯೆಂದು ಹೇಳುವದು.

ವಾರಫಲವು,--ಆದಿದ್ಯವಾರಓತಿಬಿದ್ದರೆ ಸುಖದುಃಖಸವು,ಸೋಮವಾರಬಿಗ್ದರೆ ರೋಗ ಪರಿಹಾರವು, ಮಂಗಳವಾರ ಬಿದ್ದರೆ ತನ್ನ ವೈರಿ ಸಂಹಾರ, ಬುಧವಾರ ಬೀಳಲು, ಗುರುವಾರಬೀಳಲು ಧನಲಾಭ, ಶುಕ್ರವಾರ ಬಿದ್ದರೆ ಸ್ತ್ರೀಯಳು ಹಾನಿ, ಶನಿವಾರಬಿದ್ದರೆ ದುಃಖ ಪರಿಹಾರವು.

ಕಾಗಿಯ ಶಕುನವು.

ಆದಿತ್ಯವಾರದಿವಸ ಕಾಗಿಯು ನೆತ್ತಿಹೊಯ್ದರೆ ಕಾರ್ಯಹಾನಿ, ಸೋಮವಾರಕಾಗಿ ಮುಟ್ಟಿದರೆ ಸಂಪತ್ತು, ಮಂಗಳವಾರ ಮುಟ್ಟಿದರೆ ಕಷ್ಟವು. ಬುಧವಾರ ಕಾಗಿಯು ಮುಟ್ಟಿದರೆ ಅಳುವಿನಸುದ್ದಿ, ಗುರುವಾರ ಮುಟ್ಟಿದರೆ ಲಾಭದೋರುವದು, ಶುಕ್ರವಾರ ಮುಟ್ಟಿದರೆ ಅಮೃತಾನ್ನ ವುಂಬುವನು, ಶನಿವಾರ ಮುಟ್ಟಿದರೆ ಕಲಹವೆಂದ್ಹೇಳುವದು.

ಇನ್ನೂ ಮೈನೆರದರೆ ಫಲವಂಪೇಳ್ವೆ.

೧ ಅಶ್ವಿನಿಯಲ್ಲಿ ಮೈನೆರದರೆ ಮಹಾಲೇಸು, ೫ವರ್ಷದಮೇಲೆಫಲವುಂಟು
೨ ಭರಣಿಯಲ್ಲಿ–ಐದುಮಕ್ಕಳಫಲ ಮಹಾಲೇಸುಂಟು
೩ ಕೃತ್ತಿಕನಕ್ಷತ್ರದಲ್ಲಿ ಮೈನೆರದರೆ–ಗಂಡಗೆಹೀನ,ಚೈತ್ರಮಾಸ ಕೂಡೆ ಹೀನ, ಭಯತಪ್ಪಿಉಳಿದರೆ ಮಕ್ಕಳಫಲ ಮಧ್ಯಮಾ
೪ ರೋಹಿಣಿಯಲ್ಲಿ ಹೆಣ್ಣು ಮಕ್ಕಳಫಲರೋಗಿ
೫ ಮೃಗಶಿರದಲ್ಲಿ--ಹೆಣ್ಣುಮಕ್ಕಳ ಫಲಪ್ರಾಪ್ತಿಯಾಗುವಳು
೬ ಆದ್ರೆಯಲ್ಲಿ–ಗಂಡುಮಕ್ಕಳ ಫಲ ಬಹುನೀತಿವಂತೆಯಹಳು
೭ ಪುನರ್ವಸುನಲ್ಲಿ--ಚೊಚ್ಚಲ ಹೆಣ್ಣು ೬ಮಕ್ಕಳ ಫಲಶುಭವು
೮ ಪುಷ್ಯನಲ್ಲಿ --ಗಂಡುಮಕ್ಕಳ ಫಲವುಂಟು ಮಹಾಸಂತೋಷ

೯ ಆಶ್ಲೇಷೆಯಲ್ಲಿ ನೆರದರೆ ಅತ್ತೆಮಾವಗೆ ಹೀನಗಂಡುಮಕ್ಕಳಫಲವುಂಟು.
೧೦ ಮಘಾನಕ್ಷತ್ರದಲ್ಲಿ ನೆರದರೆ ಬಸರು ಜಯವು ದುರ್ಜನಿಯನಿಸುವಳು.
೧೧ ಹುಬ್ಬೆಯತ ನೆರದರೆ ೩ಮಕ್ಕಳಫಲವುಂಟು ಕುಂಟಣಿಯಾಹಳು.
೧೨ ಹಸ್ತದಲ್ಲಿನೆರದರೆ ಹೆಣ್ಣು ಮಕ್ಕಳಫಲಕುಂಬದಾಟೀತು.
೧೩ ಚಿತ್ತಿಯಲ್ಲಿ ನೆರದರೆ ಹೆಣ್ಣು ಮಕ್ಕಳಫಲ, ಕುಂಬದಾಟೀತು.
೧೪ ಸ್ವಾತಿಯಲ್ಲಿ ನೆರದರೆ ಗಂಡುಮಕ್ಕಳಫಲವುಂಟು ಪರಂತು ಕಣ್ಣೀರು ತಪ್ಪದು ಯಾವದಾದರೊಂದುಕಾರಣದಿಂದದುಃಖಪ್ರಾಪ್ತಿ.
೧೫ ಉತ್ತರೆಯಲ್ಲಿನೆರದರೆ ಮಹಾಲೇಸು ಗಂಡಸು ಮಕ್ಕಳ ಫಲಮಕ್ಕ.
೧೬ ವಿಶಾಖೆಯಲ್ಲಿ ನೆರದರೆ ಬಳಗಕ್ಕೆ ಹೀನ ಗಂಡುಮಕ್ಕಳಫಲ,
೧೭ ಅನೂರಾಧದಲ್ಲಿ ನೆರದರೆ ಮಹಾಲೇಸು ೭ ಮಕಳಫಲವುಂಟು.
೧೮ ಜ್ಯೇಷ್ಠದಲ್ಲಿ ನೆರದರೆ ಮಕ್ಕಳಫಲಕುಂಬದಾಟೀತುಸೂಳೆಆಗುವಳು.
೧೯ ಮೂಲಾನಕ್ಷತ್ರದಲ್ಲಿನೆರದರೆಗಂಡಗೆಹೀನ,ಮಕ್ಕಳುತಡದುಜದಾವು.
೨೦ ಪೂರ್ವಾಷಾಢದಲ್ಲಿನೆರದರೆ ಚೊಚ್ಚಲು ಹೆಣ್ಣು ೯ ಫಲವುಂಟು.
೨೧ ಉತ್ತರಾಷಾಢದಲ್ಲಿನೆರೆದರೆ ಚೊಚ್ಚಲುಗಂಡುಮಕ್ಕಳು ೭ಅಂತೂಫಲ
೨೨ ಶ್ರವಣದಲ್ಲಿನೆರದರೆ ವ್ಯಾಧಿ ಅಲಗಿನ ಭಯಫಲಮಧ್ಯಮ.
೨೩ ಧನಿಷ್ಟಾದಲ್ಲಿ ನೆರದರೆ ಮಕ್ಕಳು ೧ ಫಲ ತಾಅಲಸ್ಯಧನಸಂಪದವು.
೨೪ ಶತತಾರಿಯಲ್ಲಿನೆರದರೆ ಹೆಣ್ಣುಮಕ್ಕಳಫಲ ಅಪಜಯವುಂಟು.
೨೫ ಪೂರ್ವಾಭಾದ್ರಪದದಲ್ಲಿ ನೆರದರೆ ೯ ಫಲವುಂಟು, ಚೊಚ್ಚಲು ಗಂಡ ಗಂಡನಮನೆಗೆ ಜಯವಿಲ್ಲ.
೨೬ ಉತ್ತರಾಭಾದ್ರಪದದಲ್ಲಿ ನೆರದರೆಶುಭ, ಲೇಸು, ಅರ್ಥಲಾಭ, ಗಂಡು ಮಕಳ ಫಲ.
೨೭ ರೇವತಿಯಲ್ಲಿ ನೆರದರೆ ಹೆಣ್ಣುಮಕ್ಕಳಫಲ ೫ ಮಹಾಮಳತು.

ಇನ್ನೂ ವಾರಫಲಶ್ರುತಿಪೇಳ್ವೆ.

೧ ಆದಿತ್ಯವಾರ ನೆರೆಯಲು ವ್ಯಾಧಿಯಿಂದದಣಕೊಂಬುವಳು.
೨ ಸೋಮವಾರನೆರೆಯಲು ಬದುಕುವಂತಿಯಾಗುವಳು.
೩ ಮಂಗಳವಾರನೆರೆಯಲು ದುಃಖಪ್ರಾಪ್ತಿಸುವಳು.
೪ ಬುಧವಾರ ನೆರದರೆ ಮಕ್ಕಳವಂತಿಯಾಗುವಳು.
೫ ಗುರುವಾರನೆರದರೆ ಸೌಭಾಗ್ಯವತಿಯಾಗುವಳು.
೬ ಶುಕ್ರವಾರನೆರದರೆ ಶ್ರೀವಂತಿಯಾಗುವಳು.
೭ ಶನಿವಾರ ನೆರದರೆ ಧನಹಾನಿ,ನಾಶ, ಹೀನತಟ್ಟುವದು.

### ಪ್ರಹರಫಲವು.

ಪ್ರಾತಃಕಾಲಕ್ಕೆ ನೆರದರೆ ಶುಭ, ಮಧ್ಯಾಹ್ನಕ್ಕೆ ನೆರದರೆ ಧನಸಂಪದವು, ಒಂಭತ್ತು ಘಂಟೆಗೆ ದಾರಿದ್ರ್ಯ, ರಾತ್ರಿ ನೆರದರೆ ರೋಗವು.

### ತಿಥಿಯ ಫಲ.

೧ ಪಾಡ್ಯದಲ್ಲಿ ನೆರದರೆ ವಳಿತು ೨ ಬಿದಿಗೆಯಲ್ಲಿ ಭಾಗ್ಯವಂತಿ
೩ ತದಿಗಿಯಲ್ಲಿ ಸರ್ವಸಂಪತ್ತು ೪ ಚೌತಿಯಲ್ಲಿ ಮನಿಗೆ ವಳಿತಲ್ಲವು.
೫ ಪಂಚಮಿಯಲ್ಲಿ ಸೌಭಾಗ್ಯವತಿ ೬ ಷಷ್ಠಿಯಲ್ಲಿ ಕುಂಭಟ್ಟಿಯ ಕಶ್ಯ
೭ ಸಪ್ತಮಿಯಲ್ಲಿ ತೇಜಸ್ವಿ, ವಳಿತು ೮ ಅಷ್ಟಮಿಯಲ್ಲಿ ಹುಟ್ಟಿದವನಿಗ ಕಟ್ಟೇತ್ತು.
೯ ನವಮಿ ಪಾಪಿ ಪೀಡಾಕರವು ೧೦ ದಶಮಿಯಲ್ಲಿ ಭೋಗಸುಖವು.
೧೧ ಏಕಾದಶಿಯಲ್ಲಿ ಲಾಭ. ೧೨ ದ್ವಾದಶಿಯಲ್ಲಿ ಉತ್ತಮ
೧೩ ತ್ರಯೋದಶಿಯಲ್ಲಿ ಬಹುಸುಳ್ಳಿ ೧೪ ಕುಂಟಲಗಿತ್ತಿಯಾಗುವಳು.
೧೫ ಹುಣ್ಣಿಮಿ ಅಮಾವಾಸ್ಯ ಈ ತಿಥಿಯಲ್ಲಿ ನೆರದರೆ ಮೂರು ತಿಂಗಳೊಳು ರಂಡಿಯಾಗುವಳೆಂದು ಹೇಳುವದು.

### ಮಾಸ ಫಲವು.

೧ ಚೈತ್ರಮಾಸದಲ್ಲಿ ನೆರದರೆ ವ್ಯಾಧಿ—
೨ ವೈಶಾಖಮಾಸದಲ್ಲಿ—ಪುತ್ರವಂತಿಯಾಗುವಳು.
೩ ಜ್ಯೇಷ್ಠದಲ್ಲಿ—ರೋಗಿಯಾಗುವಳು.
೪ ಆಷಾಢದಲ್ಲಿ—ಬಾಂಧವರ ನಾಶನವು.
೫ ಶ್ರಾವಣದಲ್ಲಿ—ಧನಸಂಪದವು.
೬ ಭಾದ್ರಪದದಲ್ಲಿ—ಇಲ್ಲದಕೇಡು ಪ್ರಾಪ್ತಿಸುವದು.
೭ ಆಶ್ವೀಜದಲ್ಲಿ—ಮಕ್ಕಳ ಪಲಮುಕ್ಕ.
೮ ಕಾರ್ತೀಕದಲ್ಲಿ—ಅತಿತೀವ್ರ ಮಕ್ಕಳ ಪಲವುಂಟು.
೯ ಮಾರ್ಗಶೀರ್ಷದಲ್ಲಿ ನೆರದರೆ ಕುಲಮಾನಹೀನವು.
೧೦—೧೧—೧೨ ಪುಷ್ಯ, ಮಾಘ, ಫಾಲ್ಗುಣ, ಈ ೩ ಮಾಸಗಳಲ್ಲಿ ವ್ಯೈ ನೆರದರೆ ಲೇಸುಂಟು ಒಳ್ಳೇದೆಂದು ಹೇಳುವದು.

### ನೆರದುದಕ್ಕೆ ಕೇಳಬಂದ ದಿಕ್ಕು ನೋಡಿ ಹೇಳುವದು.

ಇಂದ್ರನಲ್ಲು ನಿಂತು ಕೇಳಲು ಅವಳು ೧ ಝಾಮದಲ್ಲಿ ರಜಪಕಾಣುವಳು ಕೇಳುವಾತನು ಕೆಂಪುವುಟ್ಟ ಶೀರಿಯು ಶರಗ ಹರಕು ಬಳಿಗೆಂಪು ಆಗಿಯೂ ಬಲುಗಂಭೀರಳು ಗಂಡನಿಗೆ ಶೇರಳು ಐದು ಮಕ್ಕಳ ಫಲವುಂಟು.

ಅಗ್ನಿಯಲ್ಲು ನಿಂತು ಕೇಳಲು,೩ಝಾವದಲ್ಲಿ ರಜನ ಕಂಡಾಳು. ತಾನು ಕೆಂಪು ವೃಟ್ಟಶೀರಿ ಬಿಳೇದು ಆಕಿಗೆ ೮ ಮಕ್ಕಳ ಫಲವುಂಟು

ಯಮನಲ್ಲುನಿಂತು ಕೇಳಲು ೩ ಝಾವದಲ್ಲಿ ರಜನ ಕಂಡಾಳು, ಆಕೆಗೆ ಪರರತೋರಿದಕಲ್ಕಿ ಆಕೆ ತಾನು ಶಾನುವರ್ಣ ವೃಟ್ಟಶೀರಿ ಕಪ್ಪದು ಆಕೆಗೆಮೂರುಮಕ್ಕಳ ಫಲವುಂಟು ಪರವಶವಾಗುವಳು.

ನೈಋುತ್ಯದಲ್ಲು ನಿಂತುಕೇಳಲುತಾನು ಕೆಂಪು ಆಕೆ ೭ ನೆಝಾವದಲ್ಲಿರಜನಕಂಡಾಳುವೃಟ್ಟಶೀರಿ ಬಿಳಿಯದು, ಕರೇದು ಕೆಂಪು ಸರಿಬೆರಿಕೆ ೪ ಮಕ್ಕಳ ಪಲವುಂಟು ಯೆಂದು ಹೇಳುವದು.

ವರುಣನಲ್ಲಿ ನಿಂತು ಕೇಳಲು ವೃಟ್ಟಶೀರೆಕರಗು ಬಣ್ಣದ್ದು ಆಕಿ ಅಸ್ತಮಾನ ಆದಝಾವಕ್ಕೆ ರಜವಕಂಡಾಳು ಪರರತೋರಿದರು ಗಂಡನಮೇಲೆ ಪ್ರೀತಿಯುಳ್ಳಾಕೆಯಾಗುವಳು ಆಕೆಗೆ ಐದುಮಕ್ಕಳು.

ವಾಯುವ್ಯನಲ್ಲಿ ನಿಂತುಕೇಳಲು ಆಕಿ ಎರಡು ಝಾವದಲ್ಲಿ ರಜಕಾಣುವಳು. ಆಕೆ ಸಾದಿವರ್ಣ ವೃಟ್ಟಶೀರೆ ತೊಗರಿಬಣ್ಣದ್ದು ಆಕಿಗಂಡನಮೇಲೆಪ್ರೀತಿಯುಳ್ಳವಳು ಗಂಡಸುಮಕ್ಕಳ ಪಲವುಂಟು.

ಕುಬೇರನಲ್ಲು ನಿಂತು ಕೇಳಲು ಆಕೆನಡು ಇರಳು ರಾತ್ರಿಯಲ್ಲಿ ರಜವ ಕಂಡಾಳು, ಆಕೆ ಸಾದಿವರ್ಣ ವೃಟ್ಟಶೀರೆಯು ಕೆಂಪು ಪತಿವ್ರತೆಮಕ್ಕಳಿಲ್ಲದಬಂಜೆ.

ಈಶಾನ್ಯನಲ್ಲಿ ನಿಂತುಕೇಳಲು ಬೆಳಗಾದ ಝಾವದಲ್ಲಿ ರಜನ ಕಂಡಾಳು ಆಕೆ ತಾನುಕೆಂಪು ವೆಗ್ಗಳವಾಗಿಗಂಡನ ಬಿಟ್ಟು೮ ಮಕ್ಕಳಪಲವುಂಟುಯೆಂದು ಹೇಳಬೇಕು.

ಇನ್ನು ನಕ್ಷತ್ರಪಲಗಳು.

೧. ಅಶ್ವಿನೀಯಲ್ಲಿ ಪಶುವಕಟ್ಟಬಹುದು,ದ್ವಾರವಾಡ ನಿಲ್ಲಿಸುವದು ಪೈಣವಾಡ ಬಹುದು, ಎತ್ತಿಗೆ ಮೂಗದಾಣ ಹಾಕಬಹುದು, ಹುಟ್ಟಿದಶಿಶುವು, ಹಿರಿಯತನವಾಡೀತು.

೨. ಭರಣಿಯಲ್ಲಿ ಆಭರಣಗಳು ಮಾಡಿಸುವದು ಹುಡುಗರಿಗೆಕಿವಿಯನ್ನ ಚುಚ್ಚಿಸುವದು,ಹೆಂಣುಮಕ್ಕಳಿಗೆಶಾಲೆ ಕುಪ್ಪಸವ ನುಡಿಸಬಹುದು, ಹೊಲವಬಿತ್ತಲೇಸು, ಹುಟ್ಟಿದ ಕೂಸು ಸುಖದಿಂದ ಬಾಳ್ವದು.

೩. ಕೃತ್ತಿಕಾ ನಕ್ಷತ್ರದಲ್ಲಿ ಮಂತ್ರವ ಕಲಿಯಬಹುದು,ಒಲೆ ಯಹಾಕಬಹುದು, ರಾಹು ಬಲಕೆಮಾಡಿ ಎಡಕ್ಕೆ ಪೈಣ ಹೋಗ ಬಹುದು ಮೇಟಿಯ ನಡಿಸಬಹುದು, ಹುಟ್ಟಿದಶಿಶುವಿಗೆಮಾತ್ರಜಯವಿಲ್ಲ

೪. ರೋಹಿಣೀನಕ್ಷತ್ರದಲ್ಲಿ ರಾಶಿಮಾಡಬಹುದು, ಲಗ್ನ ಮಾಡಬಹುದು, ಊರಿಗೆ ಹೋಗಲಾಗದು, ಭೂಮಿ ಹೊಸದಾಗಿಹಿಡಿಯಬಾರದು, ಹುಟ್ಟಿದಶಿಶುವು ತನ್ನಪುರುಷನಬಿಟ್ಟು ಅನ್ಯಪುರುಷನಿಗೆವಶವಾಗುವಳು ಗಂಡಾದರೆ ಅಧಮನಾಗುವನೆಂದು ಹೇಳುವದು.

೫. ಮೃಗಶಿರಾನಕ್ಷತ್ರದಲ್ಲಿ ಗಳಗಿ,ಕಣಜ,ತಲಬಾಗಲು ಇದಕ್ಕೆ ಲೇಸು,ಹೊಲವಬಿತ್ತೆಲೇಸು ನೇಗಲು ಹೊಡಿಯೇ ಲೇಸು,ಹುಟ್ಟಿದ ಶಿಶುವು ಪರೋಪಕಾರಿಯಾಗುವದು ಯೆಂಹೇಳಬೇಕು.

೬. ಆರ್ದ್ರಾನಕ್ಷತ್ರದಲ್ಲಿಹೆಂಚು ತೆಗಿಯಬಹುದು-ಕೆರೆ,ಭಾವಿ ತೆಗಸಬಹುದು, ಬಣವೀನೊಟ್ಟಲಾಗದು,ಹುಟ್ಟಿದ ಶಿಶುವು ಬಡತನದಲ್ಲಿ ಬಾಳ್ವದು, ಪೂರಿಗೆ ಹೋಗಲಾಗದು.

೭. ಪುನರ್ವಸು ನಕ್ಷತ್ರದಲ್ಲಿ ಮನೆಯಿಂದ ಮತ್ತೊಂದು ಮನೆಗೆಮನಮಾಡಬಹುದು,ಬಣವಿಯ ನೋಡಲಾಗದು, ವ್ಯಾಧಿಕೇಳಿದರೆ ಮರಣವು, ಊರಿಗೆಹೋಗಲಾಗದು, ಹುಟ್ಟಿದಶಿಶುವು ಅಪಜಯದಿಂದ ಬಾಳ್ವದು

೮. ಪುಷ್ಯನಕ್ಷತ್ರದಲ್ಲಿ ಊರಿಗೆಹೋಗಬಹುದು, ಬೀಜವಬಿತ್ತಬಹುದು. ಹೈನವಕೊಳ್ಳಬಹುದು, ಹುಟ್ಟಿದಶಿಶುವು ದಯವುಳ್ಳದ್ದಾಗುವದು.

೯ ಆಶ್ಲೇಷಾನಕ್ಷತ್ರದಲ್ಲಿ ಮನೆಯ ಕಟ್ಟಲಾಗದು. ನೀರಲಸಿಯನ್ನು ಹಚ್ಚಬಹುದು, ಹುಟ್ಟಿದಶಿಶುಸಾಮಾನ್ಯ.

೧೦. ಮಘಾನಕ್ಷತ್ರದಲ್ಲಿ ಎಂಮೆಯ ಕೊಳ್ಳಬಹುದು, ಬಣವಿಯನೊಟ್ಟಬಹುದು, ಹಗಿಯನಿರ್ಮಾಕಬಹುದು, ಹುಟ್ಟಿದಶಿಶುವಿಗೆವಿದ್ಯಾಪ್ರಾಪ್ತಿ

೧೧. ಹುಬ್ಬಿನಕ್ಷತ್ರದಲ್ಲಿ ಹೋಳಿಯ ಸುಡಬಹುದು, ರಾಹು ಬೆಂನಮಾಡಿ ಕದನಕ್ಕೆ ಹೋಗಬಹುದು, ಬಣವಿಯನೊಟ್ಟಲು ಚಿಂತಿ ಪ್ರವೇಶವಾಗಬಹುದು-ಹುಟ್ಟಿದ ಶಿಶುವು ವಾರಿಯನಾಗಬಹುದು, ಬಹುಕಾಮಿನಿಯಾಗುವಳು-

೧೨ ಉತ್ರಿಯಲ್ಲಿ ಯೆತ್ತುಕೊಳ್ಳಲುಲೇಸು,ಬೀಜವ ಬಿತ್ತಬಹುದು. ಸರ್ವಧಾನ್ಯಗಳು ಬಿಚ್ಚಿಡಬಹುದು, ಲಗ್ನ ಮಾಡಬಹುದು ಹುಟ್ಟಿದ ಶಿಶುವು ಸಂತೋಷದಿಂದ ಬಾಳುವದು ಯೆಂದು ಹೇಳಬೇಕು.

೧೩ ಹಸ್ತಾನಕ್ಷತ್ರದಲ್ಲಿ ಲಗ್ನ ಮಾಡಬಹುದು, ಹೊಸವಸ್ತ್ರವ ಹಿದಿಯೇ ಲೇಸು, ನವಕೊಳ್ಳಲೇಸು, ಊರಿಗೆ ಹೋಗೆ ಲೇಸು, ಬೀಜವಬಿತ್ತೆಲೇಸು, ಹೈಹುಟ್ಟಿದಶಿಶುವುಪಟ್ಟಣವದಲ್ಲಿ ಬಾಳ್ವದು.

೧೪ ಚಿತ್ತಾನಕ್ಷತ್ರದಲ್ಲಿ ಮನೇಕಟ್ಟಬಹುದು,ಸ್ತ್ರೀಇವು ಮಾಡಲಾಗ

ದು ಹೆಣ್ಣಿನಸಂಗ ಮಾಡಬಹುದು, ಹೊಸದಾಗಿ ಹೋರಿಗೆ ಸಬಿರಹಾ ಕಬಹುದು, ಹುಟ್ಟಿದಶಿಶುವು ಗಂಡಾದರೆ ದೇಶ ಸರ್ವ್ವಟಣೆ, ಹೆಣ್ಣಾದರೆ ಜಾರ ಸ್ತ್ರೀಯಾಗುವಳು ಎಂದು ಹೇಳಬೇಕು

೫. ಸ್ವಾತೀನಕ್ಷತ್ರದಲ್ಲಿ ಬೀಜವಬಿತ್ತಬಹುದು,ಗುಡಿಯು ಕಟ್ಟಲುಲೇಸು, ಹುಟ್ಟಿದ ಶಿಶುವು ಕಷ್ಟಪಟ್ಟು ಮುಂದೆಜಯಿಸುವುದು.

೧೬. ವಿಶಾಖನಕ್ಷತ್ರದಲ್ಲಿಮೊಕ್ಕಲು ಹೋಗಲಾಗದು. ಸರ್ಪ್ಪಕಚ್ಚಲಾಗದು. ಆಯುಧವಕೊಳ್ಳ ಲೇಸು ಹುಟ್ಟಿದಶಿಶುವು ಚೋರನಾಗುವನು.

೧೭. ಅನೂರಾಧಾ ನಕ್ಷತ್ರದಲ್ಲಿ ಒಕ್ಕಲುಹೋದರೆ ಮಕ್ಕಳಿಗೆಹೀನವ್ಯದನಕರುವಿಗೆ ಜಯವಿಲ್ಲ. ಹುಟ್ಟಿದಶಿಶುವುಆಪತ್ತು ಬಟ್ಟುಮುಂದಜಯ

೧೮. ಜ್ಯೇಷ್ಠನಕ್ಷತ್ರದಲ್ಲಿ ನೇಗಲಿಸಾಗಿಸಬಹುದು. ಸಾಲವ ಕೊಟ್ಟರೆ ತಿರಿಗಿಬಾರದು. ಹುಟ್ಟಿದ ಶಿಶುವು ವಿದ್ಯಾವಂತನಾಗುವನು.

೧೯ ಮೂಲನಕ್ಷತ್ರದಲ್ಲಿ ಎತ್ತುಕೊಂಡರೆ ಲೇಸೂ,ಮದುವೆ ಶುಭ ಕಾರ್ಯಮಾಡಲು ಲೇಸು. ವ್ಯಾಪಾರ ಉಗ್ಯೋಗಕ್ಕೆ ನಷ್ಟ, ಹೋದ ಕಳವು ತಿರಿಗಿ ಬಾರದು ಗಮನಕ್ಕೆ ಲೇಸು, ಹುಟ್ಟಿದ ಶಿಶುವು ತಂದೆತಾಯಿಯ ಕಳದಿರುವದು.

೨೦. ಪೂರ್ವಾಷಾಢ ನಕ್ಷತ್ರದಲ್ಲಿ ಪ್ರೈಣ ಮಾಡಲಾಗದು, ಬಣವಿಯಲ್ಲಿ ಅಭಿಜಿತಿನಪಾದ ವಿಷವು, ಹುಟ್ಟಿದ ಶಿಶುವು ಬಂಜೆ, ನಡುಪಾದಗಳಲ್ಲಿ ಹುಟ್ಟಿ ಬಂಜೆ-ತಂದೆಯು ಕಳವುದು ಎಂದು ಹೇಳಬೇಕು.

೨೧. ಉತ್ತರಾಷಾಢ ನಕ್ಷತ್ರದಲ್ಲಿ ಹೊಲವ ಕೊಯ್ಯಲು ಲೇಸು,ನ್ಯಾಯಕ್ಕೆ ಹೋಗೆ ಲೇಸು, ಲಗ್ನವ ಆರಂಭಿಸೆ ಲೇಸು. ಬೀಜವಬಿತ್ತೆಲೇಸು ಪ್ರೈಣಕ್ಕೆ ಶುಭಮುಹೂರ್ತ,ಹುಟ್ಟಿದ ಶಿಶುವುದಯವುಳ್ಳದ್ದು ತಂದೆಯುಳಿಯುವದು,ಸುಳ್ಳುಹೇಳುವದು ಐಶ್ವರ್ಯವುಳ್ಳವನಾಗಿ ಸುಖದಿಂದಿರುವನು.

೨೨. ಶ್ರವಣ ನಕ್ಷತ್ರದಲ್ಲಿ ಮನೆಯುಕಟ್ಟಲು ಲೇಸು. ಊರಿಗೆಹೋಗೆ ಲೇಸು, ಕಟ್ಟಿಗೆಯು ಹೊಸಸಾಮಾನುಕೊಳ್ಳಲೇಸು. ಮರಮಂಡಲತೆಗೆಯಬಹುದು. ಹುಟ್ಟಿದಶಿಶುವು ಸಂತೋಷದಲ್ಲಿಹುದು, ಪರಂತು ಅಭಿಜಿತುವಿನಪಾದಿಪ್ಪದು ಬಂಜೆಯೆಂದು ಹೇಳುವದು.

೨೩. ಧನಿಷ್ಠಾನಕ್ಷತ್ರದಲ್ಲಿ ಉದಯದೀಕ್ಷವ ಮಾಡಬಹುದು,ಆಳ-ಭಂಟರ ಯಿಡಲಾಗದು, ಹುಟ್ಟಿದ ಶಿಶುವು ಒಡೆಯನ್ನ ನೆನಿಸುವದು.

೨೪. ಶತತಾರ ನಕ್ಷತ್ರದಲ್ಲಿ ಊರಿಗೆ ಹೋಗಲಾಗದು. ಹೊಲವಬಿತ್ತಲಾಗದು, ಹುಟ್ಟಿದ ಶಿಶುವಿಗೆ ವ್ಯಾಧಿ, ನಿದ್ರ್ಯ ಕಲಿಸುವದು.

೨೫ ಪೂರ್ವಾಭಾದ್ರಪದ ನಕ್ಷತ್ರದಲ್ಲಿ ಹಗೇವು ಭಾವಿಯುತೆಗಿಸೆ ಲೇಸು, ಬೀಜವಿಯು ನೂಟ್ಟಲಾಗದು, ಹುಟ್ಟಿದಶಿಶುವು ಹೆಂಗೆಗೆ ರಂಡೆತನ, ಗಂಡಾದರೆ ತಂದೆಯುಳಿಗುವನು ಎಂದುಹೇಳಬೇಕು.

೨೬ ಉತ್ತರಾಭಾದ್ರಪದ ನಕ್ಷತ್ರಗಲಿ ಸಕಲಕ್ಕೂ ಪಳಿತು, ಹುಟ್ಟಿದಶಿಶುವು ರಾಜಮನ್ನಣೆ, ಸೌಭಾಗ್ಯ ಸಂಪನ್ನನಾಗುವನು.

೨೭. ರೇವತೀ ನಕ್ಷತ್ರಗಲ್ಲಿ ಕಟ್ಟೆಯು ಕಟ್ಟಬಹುದು, ಹೊಲಸಹೊಸೆಯಬಹುದು ಉದ್ಯೋಗವ್ಯಾಪಾರಕ್ಕೆ ಹೀನವು ಮಾಡಲಾಗದು. ಆಳಿಡಲೇಸು, ನೆಲದಕತಿಗೆ ಲೇಸು, ಪೈರುಗಳಿಗೆ ಲೇಸು, ಹುಟ್ಟಿದಶಿಶುವು ಪತಿಯನಕ್ಕ ಯೆಂಗು ಹೇಳುವದು.

ಶ್ರೀಗುರುಭ್ಯೋನಮಃ॥ಪಟ್ಟ ಮತಬೋಳಗಣಿಸೆಂಠರಾಂಶ.

ಬೀಜ ಬಿತ್ತುವದಕ್ಕೆ ಶುಭಾಶುಭದ ಫಲಶ್ರುತಿಯು, ಶುಭಸುಸ್ತು.

೧೩ಹಸ್ತ–ಸ್ವಾತಿ–೨ಉತ್ತರೆ೨–ಉತ್ತರಾಷಾಢ೨೧–ಉತ್ತರಾಭಾದ್ರಪದ೨೬–ರೇವತಿ೨೭–ರೋಹಿಣಿ೪–ಚಿತ್ತ–ಅನೂರಾಧ೧೭–ಮೃಗಶಿರ೫–ಸ್ವಾತಿ೧೫–ಧನಿಷ್ಠಾ೨೩–ಮಘಾ೧೦–ಮೂಲಾ– ಈ ನಕ್ಷತ್ರಗಳಲ್ಲ ದಾನವತ್ತುಧಾನ್ಯಗಳು ಬಿತ್ತುವದು, ಗುರು ಉದಯದಲ್ಲ ಕೂರಿಗ ಹಾಕುವದು, ಆದಿತ್ಯವಾರ, ಗುರು, ಶುಕ್ರ, ಈ ಮೂರು ವಾರದಲ್ಲಿ ಬಿತ್ತಲೇಸು, ಸೋಮ ವಾರ, ಬುಧವಾರ ಈ ವಾರದಲ್ಲಿ ಬಿತ್ತಲು ಮಧ್ಯಮ ಬೆಳೆಯು. ಮಂಗಳವಾರ, ಶನಿವಾರ ಕನಿಷ್ಟವೆಂದು ಹೇಳುವದು.

ಮೇಲೆ ಹೇಳಿರುವ ೧೫ನಕ್ಷತ್ರಗಳಲ್ಲ ಶುಭವಾಗ ದಿವಸ ಬಿತ್ತುವದಕ್ಕೆ ನೇಗಲು ಹೊಡಿಯುವದಕ್ಕೆ ಕೊಯ್ಯಲಿಕ್ಕೆ ರಾಶೀ ಮುಗುಚಲಿಕ್ಕೆ ಮನೆಗೆರಾಶೀ ತರುವದಕ್ಕೆ ಈ ನಕ್ಷತ್ರಗಳು ಶುಭವೆಂದು ಹೇಳುವದು.

ಶನಿನಶಕುನದ ಫಲಮಂಪೇಳ್ವೆ.

ಆದಿತ್ಯವಾರ ಮೂಡಲು ಶನಿಯಿಹನು ಕಲಹ, ಅಗ್ನಿಯಲ್ಲುರಾಹುವಿಹನುಮರಣಾ, ಯಮನಲ್ಲಿ ಸೂರ್ಯನಿಹನು ಕಾರ್ಯಹಾನಿ, ನೈಋುತ್ಯದಲ್ಲಿ ಚಂದ್ರನಿಹನು ಸಕಲ ಕಾರ್ಯಸಿದ್ಧಿ, ವರುಣನಲ್ಲಿ ಮಂಗಳ ನಿಹನು ದುರ್ವಾರ್ತೆ, ವಾಯುವ್ಯನಲ್ಲಿ ಬುಧನಿಹನು ಭಾಂದವರ ದರ್ಶನವು, ಕುಬೇರನಲ್ಲಿ ಗುರುಯಿಹನು ಧನಲಾಭವು, ಈಶಾನ್ಯನಲ್ಲಿ ಶುಕ್ರನಿಹನುಭೋಜನವು ಯೆಂದೇಳುವದು.

ಸೋಮವಾರ—ಇಂದ್ರನಲ್ಲಿ ಶುಕ್ರನಿಹನು ಲೇಸುಂಟು, ಅಗ್ನಿಯಲ್ಲಿ ಶನಿಯಿಹನು ಕಲಹಾ, ಯಮನಲ್ಲಿ ರಾಹುಯಿಹನು ಮರಣಾ, ನೈ

ಋುತ್ಯನಲ್ಲಿ ಸೂರ್ಯನಿಹನು ನಾಶನವು, ವರುಣನಲ್ಲಿ ಚಂದ್ರನಿಹನು ಸಕಲ ಸಿದ್ಧಿ, ವಾಯುವ್ಯನಲ್ಲಿ ಮಂಗಳನಿಹನು ದುರ್ವಾರ್ತೆ, ಕುಬೇರನಲ್ಲಿ ಬುಧನಿಹನು ಲೇಸು, ಈಶಾನ್ಯನಲ್ಲಿ ಗುರು ಯಿಹನು ಕಾರ್ಯ ಲೇಸುಂಟು ಎಂದು ಹೇಳಬೇಕೂ

ಮಂಗಳವಾರ—ಇಂದ್ರನಲ್ಲಿ ಗುರುಯಿಹನು ಲೇಸುಂಟು ಲಾಭ, ಅಗ್ನಿಯಲ್ಲಿ ಶುಕ್ರನಿಹನು ಲೇಸುಂಟು, ಯಮನಲ್ಲಿ ಶನಿಯಿಹನು ಕಾರ್ಯ ಹಾನಿ, ನೈಋುತ್ಯನಲ್ಲಿ ರಾಹು ಯಿಹನು ಮರಣಾ, ವರುಣನಲ್ಲಿ ಸೂರ್ಯ ಯಿಹನು ಕಾರ್ಯ ಹಾನಿ, ವಾಯುವ್ಯನಲ್ಲಿ ಚಂದ್ರನಿಹನು ಸಕಲ ಕಾರ್ಯ ಸಿದ್ಧಿ, ಕುಬೇರನಲ್ಲಿ ಮಂಗಳ ನಿಹನು ದುರ್ವಾರ್ತೆ, ಈಶಾನ್ಯನಲ್ಲಿ ಬುಧ ಯಿಹನು, ಬಂಧುಗಳ ಪ್ರೀತಿಯುಂಟು

ಬುಧವಾರ—ಇಂದ್ರನಲ್ಲಿ ಬುಧನಿಹನು ಅಗ್ನಿಸ್ತಂಭವು, ಅಗ್ನಿಯಲ್ಲಿ ಗುರುಇಹನು ಧನಲಾಭ, ಯಮನನಲ್ಲಿ ಶುಕ್ರನಿಹನು ಸುಭೋಜನಾ, ನೈಋುತ್ಯನಲ್ಲಿ ಶನಿಯಿಹನು ಕಲಹಾ, ವರುಣನಲ್ಲಿ ರಾಹು ವಿಹನು ಹೀನವು, ಕಲಹಾ, ವಾಯುವ್ಯನಲ್ಲಿ ಸೂರ್ಯನಿಹನು ಕಾರ್ಯಹಾನಿ, ಕುಬೇರನಲ್ಲಿ ಇಂದ್ರನಿಹನು ಸಕಲಕಾರ್ಯ ಸಿದ್ಧಿ, ಈಶಾನ್ಯನಲ್ಲಿ ಮಂಗಳನಿಹನು ದುರ್ವಾರ್ತೆ ಯೆಂದು ಹೇಳುವದು.

ಗುರುವಾರ—ಇಂದ್ರನಲ್ಲಿ ಮಂಗಳ ನಿಹನು ದುರ್ವಾರ್ತೆ, ಅಗ್ನಿಯಲ್ಲಿ ಬುಧನಿಹನು ಬಂಧುಗಳ ಪ್ರೀತಿ, ಯಮನಲ್ಲಿ ಗುರು ಯಿಹನು ಧನಲಾಭ ನೈಋುತ್ಯನಲ್ಲಿ ಶುಕ್ರನಿಹನು ಲೇಸುಂಟು, ವರುಣನಲ್ಲಿ ಶನಿಯಿಹನು ಕಲಹ, ವಾಯುವ್ಯನಲ್ಲಿ ರಾಹು ಯಿಹನು ಕಾರ್ಯ ಹಾನಿ, ಕುಬೇರನಲ್ಲಿ ಸೂರ್ಯ ನಿಹನು ಕಾರ್ಯಹಾನಿ, ಈಶಾನ್ಯನಲ್ಲಿ ಚಂದ್ರನಿಹನು ಸಕಲಕಾರ್ಯಸಿದ್ಧಿ ಯೆಂದ್ಹೇಳುವದು,

ಶುಕ್ರವಾರ—ಇಂದ್ರನಲ್ಲಿ ಚಂದ್ರನಿಹನು ಸಕಲಸಿದ್ಧಿ, ಅಗ್ನಿಯಲ್ಲಿ ಮಂಗಳನಿಹನು ದುರ್ವಾರ್ತೆ, ಯಮನಲ್ಲಿ ಬುಧನಿಹನು ಸರ್ವಸಿದ್ಧಿ ನೈಋುತ್ಯನಲ್ಲಿ ಗುರುವಿಹನು ಧನಲಾಭ, ವರುಣನಲ್ಲಿ ಶುಕ್ರ ನಿಹನು ಲೇಸುಂಟು, ವಾಯುವ್ಯನಲ್ಲಿ ಶನಿಯಿಹನು ಕಲಹಾ, ಕುಬೇರನಲ್ಲಿ ರಾಹು ಯಿಹನು ಮರಣಾ, ಈಶಾನ್ಯನಲ್ಲಿ ಸೂರ್ಯನಿಹನು ಕಾರ್ಯಹಾನಿ.

ಶನಿವಾರ—ಇಂದ್ರನಲ್ಲಿ ಸೂರ್ಯನಿಹನು ಕಾರ್ಯವುಹಾನಿ, ಅಗ್ನಿಯಲ್ಲಿ ಚಂದ್ರನಿಹನು ಸಕಲಕಾರ್ಯಸಿದ್ಧಿ, ಯಮನಲ್ಲಿ ಮಂಗಳನಿಹನು ದುರ್ವಾರ್ತೆ, ನೈಋುತ್ಯನಲ್ಲಿ ಬುಧನಿಹನು ಧನಲಾಭ, ವರುಣನಲ್ಲಿ ಗುರು ವಿಹನು ಧನ

ಲಾಭ, ವಾಯುವ್ಯನಲ್ಲಿ ಶುಕ್ರನಿಹನು ಸುಭೋಜನಾ, ಕುಬೇರನಲ್ಲಿ ಶನಿಯಿಹನು ಕಲಹಾ, ಈಶಾನ್ಯನಲ್ಲಿ ಸೂರ್ಯನಿಹನು ಕಾರ್ಯಹಾನಿ, ಎಂದು ತಿಳಿಯುವದು.

ಮೇಲೆ ಬರದಿರುವ ಏಳು ವಾರಗಳಲ್ಲಿ ಎಂಟು ದಿಕ್ಕುಗಳು ಕ್ರಮವಾಗಿ ಗ್ರಹಗಳು ಸ್ಥಾನಭ್ರಷ್ಟವಾಗುತ್ತಾರೆ. ಅದರ ಉದ್ದಿಶ್ಯ ಯಾವವಾರದಲ್ಲಿ ಯಾವದಿಕ್ಕಿಗೆ ಯಾವ ಯಾವ ಗ್ರಹದ ವಸ್ತಿಯಿಧೆಯೋ ಅದರ ತಿಳುವಳಿಕೆಗೋಸ್ಕರ ಒಂದಕ್ಕೆ ಒಂದೊಂದು ಕುಂಡಲಿಯನ್ನು ಮಾಡಿ,ಸ್ಪಷ್ಟವಾಗಿ ಬರೆದರೆ ಅದರಲ್ಲಿ ಗ್ರಹಗಳ ವಸ್ತಿಯು ತಿಳಿಯುತ್ತದೆ.

ಹಿಂದೆಹೇಳಿದ ಪ್ರಕಾರ ಚರಗ್ರಹಗಳುವಾರ ಒಂದರಲ್ಲಿ ಯಾವಯಾವ ಸ್ಥಾನದಲ್ಲಿ ಇರುತ್ತಾರೆಯೆಂಬುವದರ ತಿಳುವಳಿಕೆಯುಸಂಗತಿಯನ್ನು ಕುರಿತು ಕೆಳಗೆಬರೆದು ತೋರಿಸಿರುವ ಕುಂಡಲಿಯ ಮೇಲಿಂದ ಶುಭ ಅಶುಭ ಫಲವಾಗಿಪ್ಪ್ರಸಂಗವುಂತಾದವುಗಳನ್ನು ನೋಡಿಕೊಳ್ಳಬಹುದು.

—ಆದಿತ್ಯವಾರಗಕುಂಡಲಿಯು—



ಮನುಷ್ಯರಿಗೆ ಸುಳಿಯಿದ್ದ ಲಕ್ಷಣಗಳುಪೇಳ್ವೆ.

ಭುಜದಮೇಲೆಸುಳಿ ಯಿದ್ದರೆ ಗಂಡನಮೇಲೆ ಪ್ರೀತಿಯುಳ್ಳವಳು,ಮೊಲೆಯಮೇಲೆ ಸುಳಿಯಿರಲುಜಾರಿಣಿ,ಹುಟ್ಟಿದ ಮನೆಗೆಕೊಟ್ಟಮನೆಗೆ ಬಡತನಕಕ್ಕ ಮುಂದಲೆಯಮೇಲೆ ಸುಳಿಯಿರಲುಸಂಪತ್ತು ಎಡತಲೆಯಮೇಲೆ ಸುಳಿಯಿರಲು ಕಷ್ಟವು,ಬಲದಕರ್ಣದಮೇಲೆ ಸುಳಿಯಿರಲು ದಾರಿದ್ರ್ಯ, ಎಡದ ಕರ್ಣದಮೇಲೆ ಸುಳಿಯಿರಲು ಸಂಪನ್ನೆ, ಬೆನ್ನಮೇಲೆಯಿರಲು ಸಂಪನ್ನ,ಹೊಟ್ಟೆಯಮೇಲೆ ಸುಳಿಯಿರಲು ಪತಿವ್ರತೆ,ಗಲ್ಲದಮೇಲೆ ಸುಳಿಯಿದ್ದರೆ ಘುಗಳಘಂಟಿ, ಯೆದೆಯಗುಂಡಿಗೆಯಲ್ಲಿ ಯಿರಲು ದೇಶಪಾಲು,ಬಲತೋಳಲ್ಲಿ ಸುಳಿಯಿರಲು ಪರರಿಗೆದೇಹವಾಸಿ ಯೆಡತೋಳಲ್ಲಿ ಸುಳಿಯಿರಲು ಸಂತೋಷ, ಹೊಕ್ಕಳದಮೇಲೆ ಸುಳಿಯಿದ್ದರೆ ಮರಣ, ಬಲದಅಳ್ಳಮೇಲೆ ಸುಳಿಯಿದ್ದರ ಸ್ನೇಹಲಾಭ, ಯೆಡದಅಳ್ಳಮೇಲೆ ಸುಳಿಯಿದ್ದರೆ ಸ್ನೇಹಲಾಭ ಯೆಡಬಅಳ್ಳಮೇಲಿದ್ದರೆ ನಾಶವೆಂದೂ ಹೇಳುವದು.

ಇತಿ ಸುಳಿಯಲಕ್ಷಣ ವಿಷಯಸಮಾಪ್ತವು,

ಗ್ರಾಮದ ನಾಲಾವಳಿಯ ಕ್ರಮವು.

ಸ್ಥಾನನಕ್ಷತ್ರವನಾಗಿ ಮಾಡಿಕ್ಕೊಂಡು ಕೇಳುವಾತನ ನಕ್ಷತ್ರದಮೇಲೆ ಗಣಿಸಬೇಕು. ೫ ಶಿರಕ್ಕೆ ಅರ್ಥಲಾಭ, ೩ಕ್ಕೆ ಆತನಮೊಖಹೀನವು ಆತಗೆ ಮರಣಾ, ೫ ಹೊಟ್ಟೆಗೆ ಧನಲಾಭ, ೬ ಪಾದಕ್ಕೆದಾರಿದ್ರ್ಯ, ೧ ಬೆನ್ನಿಗೆ ಪ್ರಾಣನಾಶನಾ ೪ ಹೊಕ್ಕಳಿಗೆ ಶುಭ, ೨ ಗುದಸ್ಥಾನಕ್ಕೆ ಭಯವು ಪೀಡಾಕರವು, ೧ ಬಲಹಸ್ತಕ್ಕೆ ಲಾಭಕರವು, ೧ ಎಡದಹಸ್ತಕ್ಕೆದರಿದ್ರವು.

ಪ್ರಯಾಣದಪ್ರಸಂಗದಲ್ಲಿ ಕೇಳಿ ಹೇಳುವದು.

ಆದಿತ್ಯನಲ್ಲಿನಿಂತು ಕೇಳಲು ಪ್ರಯಾಣವುಂಟು ಹೇಳುವದು.

ಚಂದ್ರನಮೇಲೆ ನಿಂತುಕೇಳಲುಹಾನೀ,ಊರಿಗೆ ಹೋಗುವಾಗ ಯೆದುರಿಗೆ ಇರಲಾಗದು, ಹೇಳುವವನ ಬೆನ್ನ ಮೇಲೆ ಯಿದ್ದರೆ ಹೋಗಲಾಗದು,

ಮಂಗಳನಮೇಲೆ ನಿಂತುಕೇಳಲು ಕಾರ್ಯಸಿದ್ಧಿ.

ಗುರುವಿನಮೇಲೆ ನಿಂತುಕೇಳಲುಹೋದಕಾರ್ಯ ಜಯಪ್ರದದಿಂದ ಆದೀತು.

ಶುಕ್ರನಮೇಲೆ ನಿಂತುಕೇಳಲು ವ್ಯರ್ಥವಾಗುವದು.

ಶನಿಯನಮೇಲೆನಿಂತು ಕೇಳಲು ಪ್ರಯಾಣತಾಮಸ, ಅವನು ಹೋದಲ್ಲಿ ರೋಗದಿಂದ ಮಲಗುವನು.

ರಾಹುವಿನ ಮನೆಯಲ್ಲಿ ನಿಂತು ಕೇಳಲು ಲೇಸಿಲ್ಲೆಂದು ಹೇಳುವದು.

ಊರಿಗೆ ಹೋದವರು ಬಂದಾರೋ ಬಾರರೋ ಎಂಬ ಪ್ರಶ್ನೆಗೆ ಮಂಗಳ ಸೂರ್ಯನಮೇಲೆ ನಿಂತು ಕೇಳಿದ್ದಕ್ಕೆ ಆಲಸ್ಯವೆಂದು ಹೇಳುವದು

ಗುರು ಶುಕ್ರರಮೇಲೆ ನಿಂತು ಕೇಳಿದಾಗ ಅರ್ಧದಾರಿ ಬಂದಿಧಾರೆಂದು ಶನಿರಾಹುವಿನ ಮೇಲೆನಿಂತುಕೇಳಿದ್ದಾದರೆ ಸಂಶಯವೆಂದೂ ಹೇಳಬೇಕು.

ಇಲ್ಲಿಗೆ ಶಕುನಪತಿ ಸಮಾಪ್ತಃ.

---

ಶ್ರೀ ಗು ರು ಪ್ರ ಸ ನ್ನ.

ಪ್ರಸ್ತಾವನ

ಇದು ಸಂಸ್ಕೃತಗ್ರಂಥ ದೊಳಗೆ ಶಿಲ್ಪಿಶಾಸ್ತ್ರದೊಳಗಣ ಒಂದುಭಾಗ ಜಲ ಶಿಲ್ಪಿಯೆಂದು ಇದು ಕನ್ನಡ ಶಬ್ದಗಳಿಂದ ಎಲ್ಲಾ ಜನರಿಗೆತಿಳಿಯುವದಕ್ಕಾಗಿ ನಿರ್ಮಿಸಿದಂಥ ಪ್ರಾಚೀನ ಮೂಲಪ್ರತಿಯಮೇಲಿಂಗ ಛಾಪಿಸಿಪ್ರಕಟಿಸಲ್ಪಟ್ಟಯಿಧೆ. ಯಾವ ಪುಣ್ಯಾತ್ಮನು ಭಾವೀಕಡಿಸುವಾಗ ಭೂಮಿಯಲಕ್ಷಣಾದಿಗಳನ್ನು ಆವಾವಸ್ಥಾನ ದಲ್ಲಿರುವ ಜಲವಾಸನೆಯ ಗುರುತುಗಳನ್ನು ಇದರಲ್ಲಿ ಹೇಳಲ್ಪಟ್ಟಿಧೆ. ಬಹುಶಾ ಜಲವಾಸನಯಿಲ್ಲದ ವಿನಹಾ ಆಸ್ಥಳಗಳಲ್ಲಿ ಈ ಮುಂದೆಹೇಳರುವ ಚಿಹ್ನೆಗಳು ತೋರಿಸಲರಿಯವು.

೨ ಇಂಥಾ ಠಾವಿನಲ್ಲಿ ಇಂತಿಷ್ಟು ಪ್ರಮಾಣದ ಮೇಲೆ ಇಂಥಾ ಕ್ರಮದಿಂದ ಭಾವೀತೆಗದರೆ ಬಹುಶಾ ನೀರುಬಿದ್ದೀತು ಎಂಬುವದರ ವಿಷಯವಾಗಿ ತಿಳುಹಿಸದ ಶಿಲ್ಪಿ ಶಾಸ್ತ್ರದ ಆಧಾರದವಿವರ--ಅನೂರಾಧಾ, ಹಸ್ತಾ, ಪುಷ್ಯ, ಧನಿಷ್ಠಾ, ಮಘಾ, ಶತತಾರಾ, ಉತ್ತರಾಭಾದ್ರಪದ, ಉತ್ತರಾಷಾಢ, ಈನಕ್ಷತ್ರದೊಳ್ ಭಾವಿಯ ತೋಡಲು ಸಿದ್ಧಿಯಪ್ಪದು. ಅಷ್ಟವಿಧಾರ್ಚನೆಯಿಂದ ವರುಣನ ಪೂಜೆಯಂ ಮಾಡಿ ಬ್ರಾಹ್ಮಣರಿಗೆ ತೃಪ್ತಿಯನ್ನು ಪಡಿಸಿಹಾಲು ತುಪ್ಪವಹೊಯ್ದು ದಾನಧರ್ಮವನ್ನುಮಾಡಿ ಈಮೇಲೆಬರದಿರುವನಕ್ಷತ್ರದಲ್ಲಿಭಾವಿಯ ತೆಗಿಸಲು ಯಾವಾಗಲೂನೀರುಸಂಪೂರ್ಣವಾಗಿಹವು. ಯಕ್ಷಿಣಿಯರು ಬರುವರು ಅರಸುಂಟು, ಆಅರಸುಮಳೆಗಾಲ ಬಯಸುವನುಆವ ಕಾಲಕ್ಕೂ ನೀರು ಸಂಪೂರ್ಣವೂ.

ಆವಾನು ಕಾಲದಲ್ಲಿ ಆ ಭೂಮಿ ಪೂಜೆಗೊಂಬುವದು, ಬಿಳಿಬಿಳಿಯಮಂಣು ಆಮೇಲೆ ಪುರುಷ ಪ್ರಮಾಣದಲ್ಲಿ ಬೆಂಕಲು ಶಿಲೆಹುಟ್ಟಿ ನೀರು ಬರುವದು. ಲಕ್ಕಿಯಕುಟಿಯ ಬದೀಲಿಹುತ್ತವಿರಲು ಅಲ್ಲಿಆಗೆಯಲುಪುರುಷಪ್ರಮಾಣದಲ್ಲಿ ಕೆಂಪು ಮಣ್ಣು ಅಲ್ಲಿಂಗ ಕೆಳಗೆಂಪು ತಾನು ತೋಡಲು ಆಮೇಲೆ

ಳೆ ತೆಂಕಣ ಮುಖವಾಗಿ ನೀರುದಾರಿತೋರುವದು. ಬೋರೆಮುತ್ತಲಗಿಡ ಕೋಡಿ ಬೆಳದಲ್ಲಿ ಅಗರಪಡಸಲು ದಿಪ್ಕಗೆ ೩ಗಜಪ್ರಮಾಣದಲ್ಲಿ ಅಗಳಲುಪ್ರ ರುಷ ಪ್ರಮಾಣದಲ್ಲಿ ಕಲ್ಲಮಣ್ಣು ತೋರಿಪಡುವಣ ಮುಖದಿಂದ ಅಮೃತ ದೋಷಾದಿಯಿಂದಲೂ ನೀರುದಾರಿತೋರುವದು ಅತ್ತಿಯಮರದ ಬದೀಲಿ ಬಿಲ್ವಪತ್ರಮರಗಳು ಯಿರಲು ತೆಂಕಲು ೧೫ ಪ್ರಮಾಣದಲ್ಲಿ ಪುರುಷಪ್ರ ಮಾಣ ಅಗಳಲು ಕರಿಯಕಪ್ಪಿ ವಿಷದವಾಸನೆಯುಂಟೇತಲೂ ದಿಶದಿಂದ ೩ಪುರುಷ ಪ್ರಮಾಣದಲ್ಲಿ ನೀರುದಾರಿತೋರಿ ಉತ್ತರದಿಂದ ನೀರುದಾರಿಬ ರುವದು ಅತ್ತಿಮರದ ಬದಿಯಲ್ಲಿ ಪಡವಲು ೧ ಮೊಳ ಮೇಲಕ್ಕೆ ಅಗಳ ಲು ೧ ಪುರುಷ ಪ್ರಮಾಣದಲ್ಲಿ ಹಾವು ಯಿರುವದು ಅಲ್ಲಿಂದ ಕೆಳಗೆ ಕರಿ ಯಕಲ್ಲು ತೋರೀತು. ಅಲ್ಲಿಂದ ಪುರುಷ ಪ್ರಮಾಣದಲ್ಲಿ ನೀರುದಾರಿ ಬ ರುವದು. ಪಡವಲು ದಿಕ್ಕೆ ಅಡವಿಯ ಬಳಿಯಲ್ಲಿ ನಡುವೆ ಹುತ್ತವಿರಲುಅ ಹುತ್ತಿನ ಬದಿಯಲ್ಲಿ ಬಡಗಲು ೩ಮೊಳಪ್ರಮಾಣದ ಮೇಲೆ ಅಗಳಲು ಅ ಲ್ಲಿ ೧ ಪುರುಷನ ಪ್ರಮಾಣದಲ್ಲಿ ಹಸಿಯ ಒಣ್ಣಾದ ಕಪ್ಪಿಇರುವದು ಇಲ್ಲಿಂ ದ ಕೆಳಗೆ ೩ ಪುರುಷ ಪ್ರಮಾಣದಲ್ಲಿ ಬಡಗಲು ನೀರುದಾರಿ ಬರುವದು, ಯಾವದಾದರು ಮರವಿರಲು ಅದರ ಕೆಳಗೆ ಕಪ್ಪಿಯಿದ್ದರೆ ೪ ಪುರುಷ ಪ್ರ ಮಾಣದಲ್ಲಿ ನೀರುಂಟು, ಪರಂತು ೨ ಪುರುಷ ಪ್ರಮಾಣದಲ್ಲಿ ನೀರುಸೋ ಸೆವಡಿದು ಕೆಸರಾಗಿ ಅಲ್ಲಿ ಕಪ್ಪಿ ಯಿರುವದು ಅದರಿಂದ ಕೆಳಗೆ ನೀರು ದಾರಿತೋರಲಹುದು. ತಾರೇಮರದ ತೆಂಕಲು ಹುತ್ತವಿರಲು ಅಲ್ಲಿಬಂದು ಪುರುಷ ಪ್ರಮಾಣದಲ್ಲಿ ನೀರುಬರುವದು. ಬಡಗಲು ಅರೆಯಮರದ ಬದಿ ಯಲ್ಲಿ ಅಗಳಲು ನೀರುಬರುವದು ತೆಂಗಿನಮರ ತಾಳದಮರಗಳು ಬೆಳದ ಲ್ಲಿ ಹುತ್ತವಿರಲು ಆಹುತ್ತಿನಅಗಳಲು೧ಪುರುಷಪ್ರ ಮಾಣದಲ್ಲಿ ಇಲ್ಲವೆ೩ ಮೊಳ ಪ್ರಮಾಣದಲ್ಲಿ ನೀರುತೋರಿತು. ಆಸ್ಥಳದಲ್ಲಿ ಮುಂದೆ ತೆಂಗುಬೆಳೆ ದೀತು. ಅಲ್ಲಿದ್ದ ಮರಗಳು ರೆಂಬೆಗಳುಚಿಗಿತುಎಲೆ ಕೋಮಲವಾಗಿರಲು, ಅನೆಲದಲ್ಲಿ ಗಿಡಮರಗಳುತಳಿತುಅಷ್ಟರೊಳಗೆಬಟವ್ವಾಗಿರಲು,ನೆಲವಣಗಿದ್ದ ಲ್ಲಿ ಯೆಳೆಯಕೊನೆಭಾರದಲ್ಲಿ ಇಂಥಾರಾವಿನಲ್ಲಿ ಹುತ್ತವಿರಲುಅದರಪಡ ವಲು೩ಮೊಳಪ್ರಮಾಣ ಅಗಳಲುಒಂದುವರೆಪುರುಷ ಪ್ರಮಾಣದಲಿಇಲ್ಲ ವೆಒಂದುಪುರುಷಪ್ರಮಾಣದಲ್ಲಿ ನೀರುಸೊನೆ ತೋರುವದು. ಮುಂದೆ ೫ಮನುಷ್ಯರುದ್ದ ಪ್ರಮಾಣದಲ್ಲಿ ನೀರು ದಾರಿ ತೋರುವದು ಪಶ್ಚಿಮ ದಿಶದಿಂದ ಕಲೆಯುಂಟಾಗುವದು. ಬೋರಿಯ ಕಂಟಕಕ್ಕೆಯ ತಂಟಿಯಿದ್ದ ರುಪಿನಲ್ಲಿ ಬಡಗಲು ಒಂದುಮೊಳ ಪ್ರಮಾಣದಲ್ಲಿ ಅಗಳಲು ಮುಂದ ಒಂ

ಡಗಲು ಒಂದವೊಳೆ ಪ್ರಮಾಣದಲ್ಲಿ ಅಗಳಲು ಮುಂದೆ ಒಂದು ಪುರುಷ
ಪ್ರಮಾಣದಲ್ಲಿ ಆವಿಯಿರಲು ಅಲ್ಲಿಂದಕೆಳಗೆ ದಕ್ಷಿಣ ದೆಶೆಯಿಂದಲೂ,ಈಶಾ
ನ್ಯದೆಶೆಯಿಂದಲೂ ನೀರುಹೋಗುವದು ಆಭೂಮಿ ಸುಗ್ಗಲಲ್ಲಿ ಭೇರಿಃ ಬ
ಡಿಗಹಾಗೆ ಪ್ರತಿಶಬ್ದನಾದಂ ಗೈಯುಲು ಅಥವಾ ಮಹಾಧ್ವನಿಕೊಳ್ಳಲುಮು
ಹಾ ನೀರುಕಾಣುವದು. ತಗ್ಗುಭೂಮಿಯಾಗಿ ವಿಶಾನಗಳು ತೋರುವದು.

ಘಣಘಣಎಂಬ ಧ್ವನಿಯುತೋರೆ ಅಲ್ಲ ೩ ಪುರುಷ ಪ್ರಮಾಣಗಲ್ಲಿ ನೀ
ರುಬರುವದು. ಮರ, ಹುತ್ತ ಇಲ್ಲದ ಠಾವಿನಲ್ಲಿ ನೇರಲಮರ ಕೋಮಲ
ವಾಗಿರೆ ನಾಲ್ಕು ಪುರುಷ ಪ್ರಮಾಣದಲ್ಲಿ ಬೆಂಕಲು ನೀರು ದಾರಿತೋರುವ
ದು. ಬದೀಲಿ ಅಗಳೆಲು ಅಲ್ಲ ನೀರು ಮಧ್ಯಮ ವಾಗಿರೆ ಕದಳೀ ಬೇವಿನ
ತೊಪ್ಪಲು, ಉತ್ರಾಣಿ, ಕುಮುರಿಯಲ್ಲಿ ಬನ್ನಿಯಕೊಳ ಇವುಸುಟ್ಟು ಬೂ
ದಿಯಮಾಡಿ, ತಮ್ಮ ಆ ನೆಲದಲ್ಲಿ ಹಾಕಲು ಮೇಲೆ ದಾರಿಗಟ್ಟಿ ನೀರುಹೊ
ಯ್ಯಲು, ಈ ಪ್ರಕಾರವಾಗಿ ೭ ದಿನಯುರಿಯಲು, ನೆಲ ಮೆತ್ತಗಾಗಿ ಅಗಳಿ
ದರೆ ನೀರು ಬರುವದು. ಒಂದು ವೇಳೆ ಕಲ್ಲು ಹತ್ತಿದರೆ ಹ್ಯಾಗೆ ಮಾಡುವ
ದೆಂದರೆ ಕಲ್ಲು ಬಿರಸಾಗಿದ್ದರೆ ಸುರಪಾನಕಾಲಿಯ ಕಟ್ಟಿಗೆ ಯೆಳ್ಳ ಕೋದ
ಳೆ, ಈಚಲು ಇವುಗಳೇ ಸುಟ್ಟು ಬೂದಿಮಾಡಿ ತಂದು ಆ ಭಾವಿಯಲ್ಲಿ ಹಾ
ಕಿ ೭ ದಿವಸದಮೇಲೆ ತೆಗದು ಅಗಳಲು ಕಲ್ಲು ಬಿರಿದು ಹೋಗುವದು. ಆಕ
ಲ್ಲಮೇಲೆ ಆಕಟ್ಟಿಗೆಯ ಕೋದಳಿಯಹಾಕಿಸುಟ್ಟು ಅದರಮೇಲೆ ಯಮ್ಮೆ
ಯ ಹುಳಿಮಜ್ಜಿಗೆಯ ಹೋಯ್ದು೭ದಿನಬಿಟ್ಟು ಆಮೇಲೆತೆಗದು ಅಗಳಲು
ಬಿರಸಾದರೆ ಆಭೂಮಿಯೊಳಗೆ ಯಿಟ್ಟಂಗಿಯ ಕಲ್ಲುಸುಣ್ಣವನ್ನಿಕ್ಕಿ ಹಾವು
ಮುಂತಾದವುಗಳು ಸಾದಸದಂತೆಕಟ್ಟಿ ಆಮೇಲೆ ೭ದಿನತರುವಾಯಾ ಒಳ್ಳೆ
ಕಲ್ಲುಗಳಿಂದ ಗಚ್ಚಿನಿಂದ ಸೋಪಾನ ಕಟ್ಟುವದು. ಆಭಾವಿಯನೀರು ಉ
ಪ್ಪಾದರೆ ನೆಲ್ಲಿಯ ಮರದ ತೊಪ್ಪಲು ಬಹಳವಾಗಿ ಆ ಭಾವಿಯಲ್ಲಿ ಹಾಕು
ವದು. ಇಪ್ಪೆಯಹೂವು ಕಾಯಿಬೇಲ್ಪ ಬೀಜವಮಾಡಿ ಹಾಕಲು ಉಪ್ಪನೀ
ರು ಹೋಗಿ ಕಿಂಚಿತ್ತಾದರೂ ಶೀಅಗುವದು. ನೀರು ಬಲ್ಕಿಯಾದ ಬಳಿಕ
ಯಾತನ ಹಚ್ಚಲು ಮಾವು, ನೇರಲು, ಬಹಳ ಸಂಪಿಗೆ ತೆಂಗು, ದಾಡಿಮ,
ಅಶೋಕೆ, ಬಸರೆ, ಅಗಳ, ಹುಣಸೆ, ಅತ್ತಿ, ತಾಳೆ, ಮುಳ್ಳು ಮುತ್ತಕ,
ಬೋರೆಇಂಥಾ ಮರಗಳನ್ನು ಹಚ್ಚಿಫಲಿಸಿ ಆಭಾವಿಯ ನೀರನೆರಿಯಲು ನಿ
ರ್ಮಲ ಉಳ್ಳಂಧವಿಶಾಲವಕ್ಕು.

ಹಸ್ತಾ, ಮಘಾ, ಅನೂರಾಧ, ರೋಹಿಣಿ, ಧನಿಷ್ಟಾ, ಶತತಾರಾ, ಉತ್ರಾ
ಷಾಢ, ಉತ್ತರ, ಈ ನಕ್ಷತ್ರಗಳೊಳು ಸಂಭವಿಸದ ದಿನವಾ ಭಾವೀ ಆ

ಗಳಸುವದು, ಯಾವಾತ ಭಾವಿ ತೆಗಿಸುವನೋ ಆತನು ಬಂದು ಪ್ರಶ್ನೆ ಕೇಳಿ ವಾಗಾ ಯಾದಿಶಕ್ಕೆ ಮುಖವಾಗಿ ನಿಂತು ಕೇಳುವನೋ ಆ ದಿಕ್ಕು ನೋಡಿ ಹೇಳುವದು

ಈತನು ಅಗ್ನಿ ಮುಖವಾಗಿ ನಿಂದಿರಲು ಅಗ್ನಿ ಉಂಟೆಂದು ಹೇಳುವದು. ವಾಯುವ್ಯ ಮುಖವಾಗಿ ನಿಂದಿರಲು ಮರಣವೆಂದೇಳುವದು. ನೈರುತ್ಯ ಮುಖವಾಗಿ ನಿಂತಿರಲು ನೀರು ಬಾರದೆಂದ್ಹೇಳುವದು. ಆ ಭಾವಿ ಹಾಳು ಬೀಳುವದು ಈ ರೀತಿಯಿಂದ ಈ ಮೂರು ದಿಕ್ಕು ಬಿಟ್ಟು, ಬಾಕೀ ದಿಕ್ಕುಗಳ ಕಡೆಗೆ ಮುಖವಾಗಿ ನಿಂತು ಪ್ರಶ್ನ ಕೇಳಿದಲ್ಲಿ ಮಹಾಸಂತೋಷವುಂಟು ನೀರು ಬರುವನು ಆ ಬಾವಿಗೆ ಝರಿ ಬಂದರೆ ಆ ಊರಿಗೆ ಆಲದಘಾಟವಾಗಲಿ, ಯಿಲ್ಲವೆ ಜನಂಯ ಘಾಟವಾಗಲಿ ಬಡಿದು ಮುಂದೆ ಪೂರಾ ಭಾವಿಯು ಶೋಧಿಸಿ ಆಗಳದಲ್ಲಿ ಅಷ್ಟವಿಧಾರ್ಜ್ಞನ ಷೋಡಶೋಪಚಾರದಿಂದ ವರುಣನ ಪೂಜೆಯಂ ಮಾಡಿ ಬ್ರಾಹ್ಮರಿಗ ಅಜ್ಞನೆಯಂಗೈಯಿಸಿ ತೃಪ್ತಿಬಡಿಸಿ, ಹಾಲು ತುಪ್ಪವ ನೀಡಿ ಕೆಲಸವನುಜ್ಞಿವದು ಅಲ್ಲಿ ದಾನಧರ್ಮವನ್ನು ಮಾಡುವದು. ಆ ಭಾವಿಗಯನೇಷ್ಟ ನೀರು ತುಂಬುವದೆಂದು ಧರ್ಮನೀತಿಯುಂಟು. ಯಾವಾಗಲು ಆ ಸ್ಥಳದಲ್ಲಿ ಯಕ್ಷಿಣಿಯು ವಾಸವಾಗಿರುವದು. ಆ ಭಾವಿಯಕ್ಷಿ ಅವಾನು ಕಾಲದಲ್ಲಿ ಪೂಜೆಗೊಳ್ಳುವದೆಂದೇಳುವದು ಅತ್ತಿಯ ಮರದ ಬದಿಯು ಹುತ್ತವಿರಲು ಪಡವಲ ೩ ಮೊಳ ಬಿಟ್ಟು ಆಗಳಲು ಒಂದು ವರೆ ಪುರುಷ ಪ್ರಮಾಣದಲ್ಲ ನೀರು ತೋರುವದು. ಅಲ್ಲಿಂದ ಮುಂದೆ ಛಿಂಗಿನರೂಪುಳ್ಳ ಮಣ್ಣು ಇದ್ದು ಗ್ಯ ನೀರು ಬರುವದು ನಾಯುತ್ತಿಯ ಮರದ ಮೂಡಲು ಹೊಸಹುತ್ತವಿರಲು, ಅದರ ೨ ಪಡವಲ ಮೊಳ ಪ್ರಮಾಣದಲ್ಲಿ ಆಗಳಲು ಅಳುವರೆ ಪ್ರಮಾಣದಲ್ಲಿ ಬಿಳಿಯ ಕಟಕ ಮಣ್ಣು ದೋರಿತು, ಆಮೇಲೆ ಅರಗಲ್ಲ ತೋರಿತು, ಕುಮುದ ಬಣ್ಣದ ಇಗ್ಗಲುಯಿರುವದು, ಮೂರು ಪುರುಷ ಪ್ರಮಾಣದಲ್ಲಿ ನೀರು ಬರುವದು. ಬಿಲ್ವಪತ್ರೆ ಮರದ ಬಡಗಲು ಹುತ್ತವಿರಲು ೩ ಮೊಳವ ಬಿಟ್ಟು ಅಗಳಲು ಪಡವಲದಾರಿ ತೋರುವದು

ಬೆಂಕಲು ಕರನೆಪ್ಪೈಲೆಯ ಬಣ್ಣದ ಬಿಳಿಯ ಕಲ್ಲು ತೋರ್ವ್ವ, ಮಣ್ಣು ಬಹಳ ಮಾಡಿ ಮೀನ ನಗವಾಸನ ತೋರ್ಯ್ಯ, ಅಲ್ಲಿಂದ ೩ ಆಳು ಪ್ರಮಾಣದಲ್ಲಿ ಆಗಳಲು ಬಡಗಲು ನೀರು ದಾರಿ ಬರುವದು, ಆ ನೀರು ಶೇಯಿರುವವು ಅದೇ ಸ್ಥಳದಲ್ಲ ಅಗಳಲು ಒಂದು ಪುರುಷ ಪ್ರಮಾಣದಲ್ಲಿ ಪಡವಲು ಹುಸ್ಸಿನ ಬಣ್ಣದ ಮಣ್ಣು ತೋರುವದು, ಮತ್ತು ಬೆಂಕಲು ಘಟ್ಟಕಲ್ಲು ಬಿದ್ದೀತು, ಎರಡು ಪುರುಷ ಪ್ರಮಾಣದಲ್ಲ ನೀರು ದಾರಿ ತೋರಿತು ಸುತ್ತಲು ಮರಗ

ಳಿಂದ ನಡುವೆಯಿದ್ದ ದತ್ತಹುಂಗಬಡಗಲು ೩ ಮೊಳ ಪ್ರಮಾಣದಲ್ಲಿ ಆಗಿ
ಯಲು ಒಂದು ಪುರುಷಪ್ರಮಾಣದಲ್ಲಿ ಮಸಿ ಮಣ್ಣಿನ ಬಂಣದೊಂದು ಕ
ಪ್ಪಿಇರುತ್ತದೆ. ಅಲ್ಲಿಂದ ಕಲ್ಲು ಅರಿದಳದ ಮಣ್ಣು ತುಂಬಿದ ಬಣ್ಣದ ಕ
ಲ್ಲು ಇರುತ್ತದೆ. ಆ ಕಪ್ಪಿಯಿಗ್ದಲ್ಲ ೪ ಪುರುಷಪ್ರಮಾಣದಲ್ಲಿ ನೀರು ಹು
ಟ್ಟುವದು. ಬಹಳ ನೀರುಬರುವದು. ಹುತ್ತದಬಡಗಲು ಟೆಂಕಲು ೩ಮೊ
ಳ ಯೆರಡುಮೊಳ ಅಂತರಆಗಿಯಲು ಒಂದುಪುರುಷಪ್ರಮಾಣದಲ್ಲ ಬಿಳಿ
ಯ ಮಣ್ಣು ಮೂಡಲು ದಾರಿತೋರ್ಕು, ಮುಂದೆ ಅದರಕೆಳಗೆ ಬಡಗ
ಲು ೩ಆಳುಪ್ರಮಾಣದಲ್ಲಿ ನೀರುದಾರಿ ತೋರುವದು. ಬಿಡದೆ ಮುಂದೆಆ
ಗಿಯಲು ನೀರುಬರುವವು. ಮತ್ತೆ ಕವಿಂದದ ಬಳ್ಳಿ ಇದ್ದಲ್ಲಿ ತಾರೇ ಮರಇ
ದ್ದಲ್ಲಿ ಪಡವಲು ಹುತ್ತವಿರಲು ಉತ್ರದಕಡೆಗೆ ೩ ಮೊಳಪ್ರಮಾಣದಲ್ಲಿ ಆ
ಗಿಯಲು೩ ಪುರುಷಪ್ರಮಾಣ ಕಪ್ಪಿ ಯಿರುತ್ತದೆ ಅಲ್ಗಿ ಕುಂಕುಮ ಬಣ್ಣ
ದ ಕಲ್ಲು, ಅಲ್ಗಿಂದ ೩ಪುರುಷ ಪ್ರಮಾಣದಲ್ಗಿ ಪಶ್ಚಿಮದಿಂದ ನೀರುಬರು
ವದು. ಮುಸಳಿಮಾಟದಲ್ಲಿ ನೀರುಬರುವದು ಗುಡ್ಡದ ನೀರವರಿ ಹುತ್ತವಿ
ರಲು ಅದರ ಬಡಗಲು ೫ ಮೊಳ ಪ್ರಮಾಣ ಆಗಿಯಲು ಒಂದು ಆಳುಪ್ರ
ಮಾಣದಲ್ಗಿ ಹಾವುತೋರುವದು. ಒಂದುವೇಳೆ ಹಾವುತೋರದಿದ್ದರೂಘ
ಟ್ಟಮಣ್ಣಿನಶಿಲೆಯು ಮಣ್ಣು ತೋರ್ಕು, ಅಲ್ಗಿಂದ ಒಂದುಪುರುಷಪ್ರಮಾ
ಣದಲ್ಲಿಬಿಳೇನೊರೆ ಸಹವಾಗಿ ನೀರುಬರುವದು. ಪಡವಲದಿಕ್ಕಿಂದ ನೀರು
ಬರುವದು, ಹಿಲಕದ ಮರದಟೆಂಕಲು ಕರಿಕೆಯು ಕೋಮಲ ವಾಗಿರಲು
ಆ ಸ್ಥಳದಲ್ಲಿ ಹುತ್ತವಿಹುದು ಅದರ ಪಡುವಲು ೩ ಮೊಳ ಪ್ರಮಾದಲ್ಲಿ ಆಗಿ
ಯಲು ಅಲ್ಲಿಂದ ಮೂರು ಪುರುಷ ಪ್ರಮಾಣದಲ್ಲಿ ಹೊನ್ನಿನ ಬಣ್ಣದ ಮ
ಣ್ಣು ಕಪ್ಪುವರ್ಣದ ಕಪ್ಪಿಇರುವದು. ಅಲ್ಲಿಂದ ಕೆಳಗೆ ಲೋಹದ ವಾಸ
ನೆಯುಳ್ಳನೀರು ತೋರುವದು. ಬಡಗಲು ನೀರು ಬರುವದು, ಆನೀರುಉ
ಪ್ಪುನೀರು ಬಡಗಲುಶೀನೀರದಾರಿ ಬರುವದು. ಬೋರೆ ಈಂಟಿ ನಿದ್ದಲಿ ಬ
ಡಗಲು ಹುತ್ತವಿರಲು ಅಲ್ಲಿಂದ ಬಡಗಲು ಮೂರುಮೊಳ ಅಂತರವಾಗಿ ೧
ಪುರುಷ ಪ್ರಮಾಣದಲ್ಲಿ ಆಮೆಯು ತೋರುವದು. ಅಮೇಲೆ ದಕ್ಷಿಣಉ
ತ್ತರದಿಂದ ನೀರುತೋರುವದು, ಈಶಾನ್ಯದ ಕಡೆಗೆ ಭಾವೀ ಅಗಳಲು ೩
ಆಳು ಪ್ರಮಾದಲ್ಲಿ ಕಲ್ಲುಬೀಳುವದು, ಆಭಾವಿಗೆ ಉದಕವಿಲ್ಲವು, ಅಂ
ಕೋಲೆ ಮರದ ಮುತ್ತದ ಮರದ ಮೂಡಲು ಹುತ್ತ ತೋರಲು ಅದರ
ಮುಂದೆ ಮೂಡಲು೩ಮೊಳ ಅಂತರದಲ್ಲಿ ಆಗಿಯಲು ಕರ್ಕ ಕರಿಯ ಕಲ್ಲು
ಕರಿಣಯಮಣ್ಣು ಕರೇಕಪ್ಪಿಯಿರುವದು, ಅಲ್ಲಿಂದ ೧ ಆಳು ಪ್ರಮಾಣ ಅ

ಗಿಯೆನೀರು ತೋರುವದು. ೧ ಪುರುಷಪ್ರಮಾಣದಲ್ಲಿ ಕೆಂಪುಕಲ್ಲಾಕೆ ೧ ಪು ಪ್ರಮಾಣ ತೋರುವದು, ಆಮೇಲೆ ಪಶ್ಚಿಮದಿಂದ ಕೆಂಪುನೀರುತೋರುವದು, ಮತ್ತು ಟೆಂಕಲು ದಿಕ್ಕಿನಿಂದ ನೀರು ಉದಾರಿ ಬಹಳವುಕ್ಕು, ಅಮೇಲೆ ೩ ಪುರುಷಪ್ರಮಾಣ ಅಗಿಯಲು ಸಮುದ್ರಕ್ಕೆ ನೀರಿನಬರುವ ಜಲವಿದ್ದಲ್ಲಿ ಗಿಡಗಳುಬೆಳೆದವರನ್ನು ನೀರುಇಲ್ಲದ ಮುಂದತ್ತ ತೋರಲು ಹೋದದ ತೆರೆ ಬಂದಹಾಗೆ ನೆಲದಲ್ಲಿ ಶೈತ್ಯ, ಇಂಥಾತಾವಿನಲ್ಲಿ ಅಗಿಯಲು ಕಲನೆಲನಾಗಲಿ ಬೆಟ್ಟನಾಗಲಿ ಹುಟ್ಟಿಗಂಧ ಮರಗಿಡಗಳು ಕೋಮಲವಾಗಿ ಚಿಗಿತಿದಲು, ಆ ತಾವಿನಲ್ಲಿ ಹುತ್ತವಿರಲು ಅಲ್ಲಿಅಗಿಯಲು ನೀರು ಬಹಳವಾಗಿ ಬರುವದು ಶ್ರೀತುಲಸಿ ಕೋಮಲ ವಾಗಿರಲುಮಿಾನಿನ ವಾಸನೆಯುಳ್ಳ ನೆಲ ಮರಗಳರಾಣಕ್ಕೆ ಯಗೊಳ ಹುತ್ತವಿದ್ದಲ್ಲಿ ಫಲ ತೋರಲು ಅಲ್ಲಿಅಗಿಯಲು ನೀರು ಬಹಳವುಂಟು ಆಲದ ಮರದಸಮಿಾಪದಲ್ಲಿ ಹುಲಗಲಗಿಡ ಬೆಳದಲ್ಲಿ ೩ ಮೊಳ ಬಿಟ್ಟು ಅಗಿಯಲು ನೀರು ಬಹಳವುಂಟು. ತಿಗಡೆ ಅಶೋಕೆ ಕಿರಿದೆಂದು ಹಾಲುಳ್ಳ ಮರಗಳಿದ್ದಲ್ಲಿ ೩ ಪುರುಷ ಪ್ರಮಾಣದಲ್ಲಿ ನೀರು ಬರುವವು ಶಿರದ ಮರಕಮರಿಯ ಬೆಡೆಸಿನ ಮರ ಅಲಸಾಲದಗಿಡ ಈ ಪ್ರಕಾರದ ಮರಗಳಿದ್ದಲ್ಲಿ ಹುತ್ತವಿರಲು ನೂರು ಗಜಪ್ರಮಾಣ ಬಡಗಳ ಅಗಳಲು ೪ ಆಳು ಪ್ರಮಾಣದಲ್ಲಿನೀರು ಬರುವವು, ಹುಲ್ಲು ಆವಾನು ಕಾಲದಲ್ಲಿ ಹಸರುಇದ್ದಲ್ಲಿ ಅಲ್ಲಿನೀರು ಬಹಳವುಂಟು, ಹುಲ್ಲು, ಇಲ್ಲದಾಗ್ಯೂ ನೆಲವುವೈನವಾಗಿರಲು ಅಲ್ಲಿಅಗಿಯಲು ಮೂರುಆಳುಪ್ರಮಾಣ ಒಂದು ಕಲ್ಲುವುಂಟು, ಆ ಕಲ್ಲುವಡಿದರೆ ನೀರು ಬಹಳವುಂಟು, ಆವದಾದರೂ ಮುಳ್ಳುಯುಳ್ಳದ ಮರಮುಳ್ಳುಯಿಲ್ಲದ ಗಿಡವು ಬೆಳದು ಕೊನೆ ಗಳಾಗಿ ಮುಳ್ಳು ತೋರದೆಯಿರಲು ಅಲ್ಲಿ ಅಗದರೆ ನೀರು ಬಹಳ ವುಂಟು, ಆವ ಮರವಾದರು ಅಲ್ಲಿನೀರಫಲವಾಗಿ ಅದರೊಳಗೆ ಒಂದು ಪುಟ ಕೊದೆಯುಳ್ಳಂಥಾದ್ದಾಗಿ ಕಾಣಿಸಲು ಬಹಳಕಾತು ಮತ್ತೊಂದು ವರ್ನತೋರಲು ಅಲ್ಲಿ ಮೂರು ಪುರುಷ ಪ್ರಮಾಣದಲ್ಲಿ ನೀರುಬಹಳ ವುಂಟೆಂದು ಹೇಳಬೇಕು, ಕಾಯಿಯುಗಿದನಾಗಲಿ ಅಥವಾ ಆವಗಿಡ ಮರನಾಗಲಿ ಹುಲ್ಲಾಗುವಾಗ್ಯೆಅಂದರೆ ಎಲೆಗೊಳ್ಳುವಾಗ ತಪ್ಪು ನಿಜವರ್ಣಬಿಟ್ಟು ಮತ್ತೊಂದುವರ್ನವಾದರೆ ಆಮರದಿಂದಮೂಡಲು ಒಂದು ಗಜಪ್ರಮಾಣದಲ್ಲಿಅಗಿಯಲು ೪ ಪುರುಷಪ್ರಮಾಣದಲ್ಲಿ ನೀರುಬಹಳವುಂಟು. ಮುಳ್ಳುತೋರುವ ಕಾಯಿಗಳಿಗೆ ಮುಪ್ಪುಮುಳ್ಳಿದ್ದರೆ ಹಾಂಗು ಬಿಳುಪಾದರೆ ಆ ಮರದಡಿಯಲ್ಲಿ ಅಗಳಲುನೀರುಬಹಳವುಂಟು ನೇರಲಗಿಡ ವಿನೋಳಗಣಮರಗಳುಕೊಂಬೆ ಎರಡು

ಳೆ ಬೂದಿಯು ಹಾಳೆ ಮಜ್ಜಿಗೆಯಲ್ಲಿ ಕಲಸಿ ಒಂದುರಾತ್ರಿಯಲ್ಲಿ ಇಟ್ಟಿದ್ದರೆ ಆ ಕಲ್ಲು ಇದ್ದಲ್ಲು ಹಾಕಿ ತುಳಿದು ಛೇದಿಸಲು, ಕಲ್ಲು ಶೀಳಿ ಹೋದದು ಹೋಳಾಗುವದು

ಇಂತಿ ಇದಕಲನೀರಶಿಲ್ಪಿ ಸಂಪೂರ್ಣ.

## ಅವಘಡಾಹ ಪರಿಜ್ಞಾನ.

| | | | |
|---|---|---|---|
| ಅಶ್ವಿನಿ.<br>ಚೂ-ಚೆ-ಚೋ-ಲಾ | ಪುಷ್ಯ.<br>ಹೂ-ಹೆ-ಹೋ-ಡಾ | ಸ್ವಾತಿ.<br>ರೂ-ರೆ-ರೋ-ತಾ | ಅಭಿಜಿತು<br>ಜೂ-ಜೆ-ಜೋ-ಖ |
| ಭರಣಿ<br>ಲಿ-ಲೂ-ಲೆ-ಲೋ | ಆಶ್ಲೇಷಾ.<br>ಡಿ-ಡು-ಡೆ-ಡೋ | ವಿಶಾಖಾ.<br>ತಿ-ತು-ತೆ-ತೋ | ಶ್ರವಣ.<br>ಖಿ-ಖೂ-ಖೆ-ಖೋ |
| ಕೃತ್ತಿಕಾ<br>ಅ-ಇ-ಉ-ಎ | ಮಘಾ.<br>ಮಾಮಿಮೂಮೆ | ಅನೂರಾಧಾ<br>ನಾ-ನಿ-ನೂ-ನೆ | ಧನಿಷ್ಠಾ.<br>ಗಾ-ಗಿ-ಗೂ-ಗೆ |
| ರೋಹಿಣಿ.<br>ಒ-ವಾ-ವಿ-ವು | ಪೂಬ್ಬಾ.<br>ಮೋ-ಟಾ-ಟಿ-ಟೂ | ಜ್ಯೇಷ್ಠಾ.<br>ನೋ-ಯು-ಇಯೋ | ಶತತಾರಕ.<br>ಸೋಸ-ಸಿಸೂ |
| ಮೃಗ<br>ವೆ-ವೋ-ಕಾಕಿ | ಉತ್ತರಾ.<br>ಟೆಟೋ-ಪಾಪಿ | ಮೂಲಂ<br>ಯೆ-ಯೋಬಾಬಿ | ಪೂರ್ವಾಭಾದ್ರ<br>ಸೆ-ಸೋ-ದಾದಿ |
| ಆರ್ದ್ರಾ.<br>ಕು-ಘ-ಙ-ಛ | ಹಸ್ತ.<br>ಪೂ-ಷ-ಣಾ-ಠ | ಪೂರ್ವಾಷಾಢಾ<br>ಬೂ-ಧಾ-ಭಾ-ಢ- | ಉತ್ತರಾಭಾದ್ರ<br>ದು-ಥ-ಝಾ-ಞ |
| ಪುನರ್ವಸು.<br>ಕೆ-ಕೋ-ಹಾ-ಹಿ | ಚಿತ್ತಾ.<br>ಪೆ-ಪೋ-ರಾ-ರಿ | ಉತ್ತರಾಷಾಢ<br>ಭೆ-ಭೋ-ಜಾ-ಜಿ | ರೇವತಿ<br>ದೆ-ದೋ-ಚಾ-ಚಿ |